# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೫೧<br>**Volume 151** | ಬೆಂಗಳೂರು, ಗುರುವಾರ, ಜನವರಿ ೨೮, ೨೦೧೬ (ಮಾಘ ೮, ಶಕ ವರ್ಷ ೧೯೩೭)<br>**Bengaluru, Thursday, January 28, 2016 (Magha 8, Shaka Varsha 1937)** | ಸಂಚಿಕೆ ೪<br>**Issue 4** |
|---|---|---|


## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ತಿದ್ದುಪಡಿ**

**ಸಂಖ್ಯೆ: ಆಕುಕ 192 ಆರ್‌ಜಿಯು 2014, ಬೆಂಗಳೂರು, ದಿನಾಂಕ: 19.11.2015.**

ಸರ್ಕಾರದ ಆದೇಶ ಸಂಖ್ಯೆ: ಆಕುಕ 192 ಆರ್‌ಜಿಯು 2014, ದಿ: 30.09.2015ರ ಆದೇಶ ಭಾಗದ 4ನೇ ಸಾಲಿನ ಪ್ರಾರಂಭದಲ್ಲಿ "ಎಂಬಿಬಿಎಸ್ ಗೃಹವೈದ್ಯರ" ಎಂಬ ಕಡೆ "ಎಂಬಿಬಿಎಸ್ ಮತ್ತು ಬಿಡಿಎಸ್ ಗೃಹವೈದ್ಯರ" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಮುರಳಿ**

**PR. 715** ಸರ್ಕಾರದ ಅಧೀನ ಕಾರ್ಯದರ್ಶಿ-2, (ಪ್ರ)

**SC. 50** ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ. (ವೈದ್ಯಕೀಯ ಶಿಕ್ಷಣ)

### ತೋಟಗಾರಿಕೆ ಸಚಿವಾಲಯ

**ತಿದ್ದುಪಡಿ**

**ಸಂಖ್ಯೆ: ತೋಇ 283 ರೇಕೃವಿ 2014, ಬೆಂಗಳೂರು, ದಿನಾಂಕ: 19.11.2015.**

ಸರ್ಕಾರದ ಆದೇಶ ಸಂಖ್ಯೆ: ತೋಇ 283 ರೇಕೃವಿ 2014, ದಿನಾಂಕ: 30-10-2015ರ ಆದೇಶ ಭಾಗದ ಪಟ್ಟಿಯಲ್ಲಿ **"ಪ್ರಸ್ತಾಪಿತ ಪ್ರತ್ಯಾಯೋಜನೆ"** ಎಂಬ ಪದಗಳನ್ನು **"ಪ್ರತ್ಯಾಯೋಜನೆ"** ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಎಲ್. ಚಿನ್ನಮ್ಮ,**

**PR. 714** ಸರ್ಕಾರದ ಅಧೀನ ಕಾರ್ಯದರ್ಶಿ,

**SC. 100** ತೋಟಗಾರಿಕೆ ಮತ್ತು ರೇಷ್ಮೆ ಇಲಾಖೆ. (ರೇಷ್ಮೆ)

### ಕಾನೂನು ಸಚಿವಾಲಯ

**ತಿದ್ದೋಲೆ**

**ಸಂಖ್ಯೆ: ಲಾ 36 ಕೆಎಲ್‌ಎಂ 2013, ಬೆಂಗಳೂರು, ದಿನಾಂಕ: 19.11.2015.**

ಸರ್ಕಾರಿ ಆದೇಶ ಸಂಖ್ಯೆ: ಲಾ 36 ಕೆಎಲ್‌ಎಂ 2013, ದಿನಾಂಕ: 26.08.2015ರ ಬೋಧಕ ಸಿಬ್ಬಂದಿ ಕ್ರಮ ಸಂಖ್ಯೆ: 03ರಲ್ಲಿ ಶ್ರೀಶೈಲ. ಎಲ್. ಇವರು **"NET ವಿದ್ಯಾರ್ಹತೆ ಹೊಂದಿರುತ್ತಾರೆ"** ಎಂಬುದರ ಬದಲಿಗೆ **"SLET ವಿದ್ಯಾರ್ಹತೆ ಹೊಂದಿರುತ್ತಾರೆ"** ಎಂದು;

ಕ್ರಮ ಸಂಖ್ಯೆ: 04ರಲ್ಲಿ **"ಡಿ.ವಿ.ರವಿಕುಮಾರ್ "** ಎಂಬುದರ ಬದಲಿಗೆ **"ರವಿಕುಮಾರ್ ಡಿ.ಬಿ."** ಎಂದು ಮತ್ತು ಸೇವೆಗೆ ಸೇರಿದ ದಿನಾಂಕವನ್ನು **"29.09.2006"** ಎಂಬುದರ ಬದಲಿಗೆ **"11.09.2006"** ಎಂದು ಓದಿಕೊಳ್ಳತಕ್ಕದ್ದು.

ಬೋಧಕೇತರ ಸಿಬ್ಬಂದಿ ಕ್ರಮ ಸಂಖ್ಯೆ: 01ರಲ್ಲಿ **"ಹೆಚ್.ಎನ್.ಮಲ್ಲಪ್ಪ"** ಎಂಬುದರ ಬದಲಿಗೆ **"ಹೆಚ್.ಎಂ.ಮಲ್ಲಪ್ಪ"** ಎಂದು;

ಕ್ರಮ ಸಂಖ್ಯೆ: 02 ರಲ್ಲಿ "ದಾರುಕ" ಎಂಬುದರ ಬದಲಿಗೆ **"ದಾರುಕ ಬಿ.ಜಿ."** ಎಂದು;

ಕ್ರಮ ಸಂಖ್ಯೆ: 08ರಲ್ಲಿ "ವೆಂಕಟೇಶ್ ಪಿ" ಇವರು **"ಎಸ್.ಸಿ."** ವರ್ಗಕ್ಕೆ ಸೇರಿರುತ್ತಾರೆ ಎಂಬುದರ ಬದಲಿಗೆ **"ಜಿ.ಎಂ."** ಎಂದು ಹಾಗೂ ನೇಮಕಾತಿ ದಿನಾಂಕವನ್ನು **"12.10.2010"**ರ ಬದಲಿಗೆ **"12.10.2000"** ಎಂದು;

ಕ್ರಮ ಸಂಖ್ಯೆ:09ರಲ್ಲಿ ಪರಶುರಾಮ್ ಎನ್.ಸಿ.**"ಜಿ.ಎಂ."** ಬದಲಿಗೆ **"ಎಸ್.ಸಿ."** ಎಂದು;

ಕ್ರಮ ಸಂಖ್ಯೆ: 12ರಲ್ಲಿ ನೇಮಕಾತಿ ದಿನಾಂಕವನ್ನು **"01.10.2012"**ರ ಬದಲಿಗೆ **"01.10.2002"** ಎಂದು ಓದಿಕೊಳ್ಳತಕ್ಕದ್ದು.

ಉಳಿದಂತೆ ಯಾವುದೇ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಎಸ್.ಸುಧಾಮಣಿ,**

ಸರ್ಕಾರದ ಅಧೀನ ಕಾರ್ಯದರ್ಶಿ, (ಪ್ರ)

ಕಾನೂನು ಇಲಾಖೆ. (ಮಾನವ ಹಕ್ಕುಗಳು)

**PR. 712**

**SC. 100**

## ಒಳಾಡಳಿತ ಸಚಿವಾಲಯ

### ಸುತ್ತೋಲೆ

**ಸಂಖ್ಯೆ: ಒಇ 91 ಪಿಸಿಬಿ 2012, ಬೆಂಗಳೂರು, ದಿನಾಂಕ: 21.11.2015.**

ಸಿಗರೇಟು ಮತ್ತು ತಂಬಾಕು ಉತ್ಪನ್ನಗಳ (ಜಾಹೀರಾತು, ವ್ಯವಹಾರ ಹಾಗೂ ವಿತರಣೆ, ಉತ್ಪಾದನೆ ನಿರ್ಬಂಧ) ಕಾಯ್ದೆ 2003ನ್ನು ರಾಜ್ಯದಲ್ಲಿ ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುತ್ತಿದ್ದು, COTPA-2003 ರಡಿ ಪ್ರಕರಣ ದಾಖಲಿಸಲು ಮತ್ತು ದಂಡ ವಸೂಲಿ ಮಾಡಲು ಅಧಿಕಾರವಿರುವ ಸರ್ಕಾರದ ವಿವಿಧ ಇಲಾಖೆಗಳು ದಾಖಲಿಸುವ ಪ್ರಕರಣಗಳು ಮತ್ತು ವಿಧಿಸುವ ದಂಡನೆಗಳು ಹಾಗೂ ಜುಲ್ಮಾನೆಗಳ ಮೊತ್ತವನ್ನು ವಿವಿಧ ಲೆಕ್ಕ ಶೀರ್ಷಿಕೆಗಳಲ್ಲಿ ಜಮೆ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದ್ದು, ಈ ಬಗ್ಗೆ ಒಂದೇ ರಾಜಸ್ವ ಲೆಕ್ಕ ಶೀರ್ಷಿಕೆಯಡಿ ಜಮೆ ಮಾಡಲು ತೀರ್ಮಾನಿಸಲಾಗಿರುತ್ತದೆ.

ಅದರಂತೆ, COTPA-2003 ರಡಿ ದಾಖಲಿಸುವ ಪ್ರಕರಣಗಳಲ್ಲಿ ವಿಧಿಸಲಾಗುವ ದಂಡನೆ ಮತ್ತು ಜುಲ್ಮಾನೆಯ ಮೊತ್ತವನ್ನು ಪ್ರಕರಣಗಳನ್ನು ದಾಖಲಿಸಲು ಮತ್ತು ದಂಡ ವಸೂಲಿ ಮಾಡಲು ಅಧಿಕಾರವಿರುವ ಸರ್ಕಾರದ ವಿವಿಧ ಇಲಾಖೆಗಳು ಇನ್ನು ಮುಂದೆ ಹೊಸ ರಾಜಸ್ವ ಲೆಕ್ಕ ಶೀರ್ಷಿಕೆ "0055–00–103–0–05" (Fines & Penalties levied under COTPA Act 2003) ರಡಿ ಕಡ್ಡಾಯವಾಗಿ ಜಮೆ ಮಾಡುವಂತೆ ತಿಳಿಸಲಾಗಿದೆ.

ಅಂತೆಯೇ, COTPA-2003 ರಡಿ ದಾಖಲಾದ ಪ್ರಕರಣಗಳು ಮತ್ತು ದಂಡ ವಸೂಲಾತಿ, ನೀಡಲಾದ ನೋಟೀಸಿನ ವಿವರಗಳು, ಇಲಾಖಾ ವತಿಯಿಂದ ಸಾರ್ವಜನಿಕರಿಗೆ ಅರಿವು ಮೂಡಿಸುವ ಕಾರ್ಯಕ್ರಮಗಳ ಅಂಕಿ ಅಂಶಗಳನ್ನು ಸಂಬಂಧಿಸಿದ ಇಲಾಖೆಗಳ ಮುಖ್ಯಸ್ಥರುಗಳು ಪ್ರತಿ ಮಾಹೆಯೂ ಪಡೆದು ಕ್ರೋಢಿಕೃತ ವರದಿಯನ್ನು ಪೊಲೀಸ್ ಅಧೀಕ್ಷಕರು, ರಾಜ್ಯ ಅಪರಾಧ ದಾಖಲಾತಿ ವಿಭಾಗ, ಬೆಂಗಳೂರು ರವರಿಗೆ ಪ್ರತಿ ಮಾಹೆಯೂ ತಪ್ಪದೇ ಕಳುಹಿಸಲು ಈ ಮೂಲಕ ತಿಳಿಸಲಾಗಿದೆ.

**ಡಿ. ಸುಗುಣ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಅಪರಾಧ)

**PR. 710**

**SC. 100**

## ಆರ್ಥಿಕ ಸಚಿವಾಲಯ

### ಸೇರ್ಪಡೆ

**ಸಂ. ಆಇ 21 ಎಸ್ ಆರ್ ಪಿ 2015, ಬೆಂಗಳೂರು, ದಿನಾಂಕ: 09.11.2015.**

ದಿನಾಂಕ: 15.03.2013ರ ಸರ್ಕಾರದ ಆದೇಶ ಸಂಖ್ಯೆ: ಆಇ 06 ಎಸ್‌ಆರ್‌ಪಿ 2013ನ್ನು ಮುಂದುವರೆಸುತ್ತಾ, ಸದರಿ ಆದೇಶದಲ್ಲಿನ "ರಾಜ್ಯಪಾಲರ ಸಚಿವಾಲಯ" ಶೀರ್ಷಿಕೆಯಲ್ಲಿನ ಕ್ರಮ ಸಂ: 1.ರ ನಂತರ ಈ ಕೆಳಗಿನ ನಮೂದುಗಳನ್ನು ಸೇರಿಸಿ ಓದಿಕೊಳ್ಳತಕ್ಕದ್ದು.

**ರಾಜ್ಯಪಾಲರ ಸಚಿವಾಲಯ:**

| | |
|---|---|
| 1(**a).** ರಾಜ್ಯಪಾಲರ ವಿಶೇಷ ಕಾರ್ಯದರ್ಶಿ | 2 ವರ್ಷಕ್ಕೊಮ್ಮೆ ರೂ. 15,000/– |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಸ್.ರಾಜಲಕ್ಷ್ಮಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಆರ್ಥಿಕ ಇಲಾಖೆ (ಸೇವೆಗಳು–2).

**PR. 708**

**SC. 50**

## ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವಾಲಯ

**ಸಂಖ್ಯೆ: ಇಡಿ 117 ಟಿವಿಇ 2015, ಬೆಂಗಳೂರು, ದಿನಾಂಕ: 30/10/2015.**

**ತಿದ್ದುಪಡಿ**

ದಿನಾಂಕ: 15/10/2015ರ ಆದೇಶ ಸಂಖ್ಯೆ: ಇಡಿ 117 ಟಿವಿಇ 2015ರ ಆದೇಶದ ಭಾಗದಲ್ಲಿ ವಿಲೀನ ಪ್ರಕ್ರಿಯೆಯನ್ನು ಪೂರ್ಣಗೊಳಿಸಲು ನಿಗಧಿಪಡಿಸಿರುವ "ದಿನಾಂಕ: 01–10–2015 ರಿಂದ ದಿನಾಂಕ: 31–03–2015" ಎಂದಿರುವುದನ್ನು "ದಿನಾಂಕ: 01–10–2015 ರಿಂದ ದಿನಾಂಕ: 31.03.2016" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ತಾರಾ,**

ಸರ್ಕಾರದ ಅಧೀನ ಕಾರ್ಯದರ್ಶಿ, (ಸಾಮಾನ್ಯ)

ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆ.

**PR. 705**

**SC. 50**

## ಸಹಕಾರ ಸಚಿವಾಲಯ

**ವಿಷಯ:** ಕರ್ನಾಟಕ ರಾಜ್ಯ ಉಗ್ರಾಣ ನಿಗಮಕ್ಕೆ 2015–16ನೇ ಸಾಲಿಗೆ ಶಾಸನಬದ್ಧ ಲೆಕ್ಕ ಪರಿಶೋಧಕರ ನೇಮಕಾತಿ ಬಗ್ಗೆ.

**ಓದಲಾಗಿದೆ:** 1. ಆದೇಶ ಸಂಖ್ಯೆ: ಸಇ 55 ರಾಉನಿ 2014, ದಿನಾಂಕ: 31.07.2015.

2. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಉಗ್ರಾಣ ನಿಗಮ ಇವರ ಪತ್ರ ಸಂ: ಕರಾಉನಿ/ ಲೆಪ/ ಸೇ.ಸೌ.ಬಿ/3639/2015–16, ದಿನಾಂಕ: 05.10.2015.

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ 2014–15ನೇ ಸಾಲಿಗೆ ಕರ್ನಾಟಕ ರಾಜ್ಯ ಉಗ್ರಾಣ ನಿಗಮಕ್ಕೆ ಶಾಸನಬದ್ಧ ಲೆಕ್ಕಪರಿಶೋಧಕರನ್ನಾಗಿ ಶ್ರೀ ಪಿ.ಚಂದ್ರಶೇಖರ್, ಚಾರ್ಟರ್ಡ್ ಅಕೌಂಟೆಂಟ್, ಬೆಂಗಳೂರು ಇವರನ್ನು ನೇಮಕ ಮಾಡಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಉಗ್ರಾಣ ನಿಗಮ ಇವರ ಪತ್ರದಲ್ಲಿ ನವದೆಹಲಿಯ ಲೆಕ್ಕನಿಯಂತ್ರಕರು ಮತ್ತು ಮಹಾ ಲೆಕ್ಕಪರಿಶೋಧಕರ ಹಿರಿಯ ಆಡಳಿತಾಧಿಕಾರಿಗಳು ದಿನಾಂಕ: 05.10.2015ರಂದು ಪತ್ರ ಬರೆದು ಮೆ॥ ಬ್ರಹ್ಮಯ್ಯ ಅಂಡ್ ಕೋ, ಚಾರ್ಟರ್ಡ್ ಅಕೌಂಟೆಂಟ್ಸ್, ಬೆಂಗಳೂರು ಇವರನ್ನು ಕರ್ನಾಟಕ ರಾಜ್ಯ ಉಗ್ರಾಣ ನಿಗಮಕ್ಕೆ 2015–16ನೇ ಸಾಲಿಗೆ ಶಾಸನಬದ್ಧ ಲೆಕ್ಕಪರಿಶೋಧಕರನ್ನಾಗಿ ನೇಮಕ ಮಾಡಲು ಕೋರಿರುತ್ತಾರೆ.

ಆದ್ದರಿಂದ 2015–16ನೇ ಸಾಲಿಗೆ ಮೆ॥ಬ್ರಹ್ಮಯ್ಯ ಅಂಡ್ ಕೋ, ಚಾರ್ಟರ್ಡ್ ಅಕೌಂಟೆಂಟ್ಸ್, ಬೆಂಗಳೂರು ಇವರನ್ನು ಕರ್ನಾಟಕ ರಾಜ್ಯ ಉಗ್ರಾಣ ನಿಗಮಕ್ಕೆ ಶಾಸನಬದ್ಧ ಲೆಕ್ಕಪರಿಶೋಧಕರನ್ನಾಗಿ ನೇಮಕ ಮಾಡಲು ಸರ್ಕಾರವು ತೀರ್ಮಾನಿಸಿದೆ. ಆದ್ದರಿಂದ, ಈ ಆದೇಶ.

**ಆದೇಶ**

**ಸರ್ಕಾರದ ಆದೇಶ ಸಂಖ್ಯೆ: ಸಇ 43 ರಾಉನಿ 2015, ಬೆಂಗಳೂರು, ದಿನಾಂಕ: 16.11.2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ನವದೆಹಲಿಯ ಲೆಕ್ಕನಿಯಂತ್ರಕರು ಮತ್ತು ಮಹಾಲೆಕ್ಕಪರಿಶೋಧಕರ ಕಛೇರಿಯ, ಹಿರಿಯ ಆಡಳಿತಾಧಿಕಾರಿಗಳ ಪತ್ರ ದಿನಾಂಕ: 06.07.2015 ರಲ್ಲಿ ವಿಧಿಸಿರುವ ಷರತ್ತಿಗೊಳಪಟ್ಟು ಕರ್ನಾಟಕ ರಾಜ್ಯ ಉಗ್ರಾಣ ನಿಗಮಕ್ಕೆ 2015–16ನೇ ಸಾಲಿಗೆ ಶಾಸನಬದ್ಧ ಲೆಕ್ಕಪರಿಶೋಧಕರನ್ನಾಗಿ ಮೆ॥ Brahmayya & CO (BA0681), Chartered Accountants, 10/2, Khivaraj Mansion, Kasturba Road, Bengaluru-560001 ಇವರನ್ನು ನೇಮಕ ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಬಿ. ಪ್ರಕಾಶ್,**

ಸರ್ಕಾರದ ಅಧೀನ ಕಾರ್ಯದರ್ಶಿ–2,

ಸಹಕಾರ ಇಲಾಖೆ.

**PR. 697**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಸಚಿವರ ವಾಹನ ಭತ್ಯೆ ದರವನ್ನು ಪರಿಷ್ಕರಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಸಂವ್ಯಶಾಇ 41 ಶಾಸನ 2006, ದಿನಾಂಕ: 04.07.2011.
2. ಸರ್ಕಾರಿ ಆದೇಶ ಸಂಖ್ಯೆ: ಸಂವ್ಯಶಾಇ 31 ಶಾಸನ 2014, ದಿನಾಂಕ: 03.04.2015.
3. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 113 ಶಿಸನೇ 2012, ದಿನಾಂಕ: 05.09.2012.
4. ಮಹಾಲೇಖಪಾಲರ ಪತ್ರ ಸಂಖ್ಯೆ: ಜಿಎಂ/ಹೆಚ್‌ಸಿ/( Mins)/2015–16/536, ದಿನಾಂಕ: 11.08.2015.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ ಕ್ರಮ ಸಂಖ್ಯೆ: (1)ರ ಸರ್ಕಾರಿ ಆದೇಶದಲ್ಲಿ 1956ರ ಕರ್ನಾಟಕ ಸಚಿವರುಗಳ ವೇತನ ಮತ್ತು ಭತ್ಯೆಗಳ ಅಧಿನಿಯಮದನ್ವಯ ಪ್ರತಿ ಸಚಿವರು 750 ಲೀಟರ್‌ಗಳ ಪೆಟ್ರೋಲ್ ದರಕ್ಕೆ ಸಮನಾದ ಮೊತ್ತವನ್ನು ಪ್ರತಿ ತಿಂಗಳ ವಾಹನದ ಭತ್ಯೆಯನ್ನಾಗಿ ಪಡೆಯಬಹುದಾಗಿರುತ್ತದೆ. ತದನಂತರ ಕ್ರಮ ಸಂಖ್ಯೆ: (2)ರ ಸರ್ಕಾರಿ ಆದೇಶದಲ್ಲಿ ಇದೇ ನಿಯಮಾವಳಿಗಳ ಅನ್ವಯ 1,000 ಲೀಟರ್‌ಗಳ ಪೆಟ್ರೋಲ್ ದರವನ್ನು ಪ್ರತಿ ತಿಂಗಳು ವಾಹನ ಭತ್ಯೆಯನ್ನಾಗಿ ಪಡೆಯಲು ಅವಕಾಶವನ್ನು ಕಲ್ಪಿಸಲಾಗಿದೆ. ಕ್ರಮ ಸಂಖ್ಯೆ: (3)ರ ಸರ್ಕಾರಿ ಆದೇಶದಲ್ಲಿ ದರ ನಿಗಧಿಪಡಿಸಿ, ಇನ್ನು ಮುಂದೆ ಕಾಲಕಾಲಕ್ಕೆ ಪರಿಷ್ಕರಿಸುವ ಇಂಧನ ದರದಂತೆ ಲೀಟರ್ ಪೆಟೋಲ್ ವೆಚ್ಚವನ್ನು ಮರುಪಾವತಿಸಲು ಅನುಮತಿಸಲಾಗಿದೆ ಕ್ರಮ ಸಂಖ್ಯೆ: (4)ರ

ಮಹಾಲೇಖಪಾಲರ ಪತ್ರದಲ್ಲಿ 1,000 ಲೀಟರ್ ಪೆಟ್ರೋಲ್ ದರವನ್ನು ನಿಗಧಿಪಡಿಸುವಂತೆ ಕೋರಿರುವ ಹಿನ್ನೆಲೆಯಲ್ಲಿ ಮಹಾ ಲೇಖಪಾಲರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 176 ಶಿಸನೇ 2015, ಬೆಂಗಳೂರು, ದಿನಾಂಕ: 03.11.2015.**

ಮೇಲಿನ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, 1956ರ ಕರ್ನಾಟಕ ಸಚಿವರುಗಳ ವೇತನ ಮತ್ತು ಭತ್ಯೆಗಳ ಅಧಿನಿಯಮದನ್ವಯ ಪ್ರತಿಯೊಬ್ಬ ಸಚಿವರಿಗೆ ಪ್ರತಿ ತಿಂಗಳು ನೀಡುವ ಇಂಧನ ಭತ್ಯೆಯನ್ನು ಇಂಧನ ತುಂಬಿಸಿದ ದಿನ ಜಾರಿಯಲ್ಲಿರುವ ದರದಂತೆ ಮರುಪಾವತಿಸಲು ಅನುಮೋದನೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ನಾಗರಾಜಪ್ಪ,**

ಸರ್ಕಾರದ ಅಧೀನ ಕಾರ್ಯದರ್ಶಿ–2,

ಸಿ.ಆ.ಸು. ಇಲಾಖೆ.(ರಾಜ್ಯ ಶಿಷ್ಟಾಚಾರ)

**PR. 685**

**SC.300**

## ಹಿಂದುಳಿದ ವರ್ಗಗಳ ಕಲ್ಯಾಣ ಸಚಿವಾಲಯ

**ವಿಷಯ:** ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ವೃಂದ ಮತ್ತು ನೇಮಕಾತಿ ವಿನಿಯಮಗಳು–2011ರ ದ್ವಿತೀಯ ದರ್ಜೆ ಸಹಾಯಕರು ಕಮ್ ಕಂಪ್ಯೂಟರ್ ಆಪರೇಟರ್ ಹುದ್ದೆಗಳ ವಿದ್ಯಾರ್ಹತೆಗೆ ತಿದ್ದುಪಡಿ ಹೊರಡಿಸುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರದ ಆದೇಶ ಸಂಖ್ಯೆ:ಸಕಇ 20 ಮೊದೇಶಾ 2010, ದಿನಾಂಕ:21–10–2015.
2. ಸರ್ಕಾರದ ಅಧಿಸೂಚನೆ ಸಂಖ್ಯೆ:ಸಕಇ 18 ಸೇವನೆ 2013, ದಿ:13–12–2013.
3. ಕಾರ್ಯನಿರ್ವಾಹಕ ನಿರ್ದೇಶಕರು, ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘ, ಇವರ ಪತ್ರ ಸಂಖ್ಯೆ:ಕವಶಿಸಸ/ಸಿಆರ್–07/ಪಿ,2015–16, ದಿನಾಂಕ:14–10–2015.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ, ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ವೃಂದ ಮತ್ತು ನೇಮಕಾತಿ ವಿನಿಯಮಗಳು–2011ಕ್ಕೆ ಅನುಮೋದನೆ ನೀಡಿ ಆದೇಶಿಸಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯು ಕರ್ನಾಟಕ ಸಿವಿಲ್ ಸೇವಾ (ಲಿಪಿಕ ಹುದ್ದೆಗಳ ನೇಮಕಾತಿ) ನಿಯಮಗಳು–1978ಕ್ಕೆ ತಿದ್ದುಪಡಿ ಮಾಡಿ ದ್ವಿತೀಯ ದರ್ಜೆ ಸಹಾಯಕರ ಹುದ್ದೆಗೆ ನಿಗಧಿಪಡಿಸಿದ ವಿದ್ಯಾರ್ಹತೆಯನ್ನು "ಪ್ರೌಢ ಶಿಕ್ಷಣ ಪ್ರಮಾಣ ಪತ್(ಎಸ್.ಎಸ್.ಎಲ್.ಸಿ.) ಅಥವಾ ಇದರ ತತ್ಸಮಾನ ವಿದ್ಯಾರ್ಹತೆ" ಬದಲಾಗಿ "ಪದವಿ ಪೂರ್ವ ಶಿಕ್ಷಣ ಪರೀಕ್ಷೆ ಅಥವಾ ಇದರ ತತ್ಸಮಾನ ವಿದ್ಯಾರ್ಹತೆ" ಎಂದು ನಿಗಧಿಪಡಿಸಿ ಆದೇಶಿಸಿದೆ.

ಅದರಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದಲ್ಲಿ ಕಾರ್ಯನಿರ್ವಾಹಕ ನಿರ್ದೇಶಕರು, ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘ, ಇವರು ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ವೃಂದ ಮತ್ತು ನೇಮಕಾತಿ ವಿನಿಯಮಗಳು–2011ರ ಷೆಡ್ಯೂಲ್–1 ರಲ್ಲಿ ದ್ವಿತೀಯ ದರ್ಜೆ ಸಹಾಯಕರು ಕಮ್ ಕಂಪ್ಯೂಟ್ ಆಪರೇಟರ್ ಹುದ್ದೆಗಳಿಗೆ ಪಿಯುಸಿ ವಿದ್ಯಾರ್ಹತೆಯನ್ನು ನಿಗಧಿಪಡಿಸಿ ತಿದ್ದುಪಡಿ ಆದೇಶ ಹೊರಡಿಸಲು ಕೋರಿರುತ್ತಾರೆ.

ಈ ಮೇಲಿನ ಪ್ರಸ್ತಾವನೆಯನ್ನು ಸರ್ಕಾರ ಪರಿಶೀಲಿಸಿ, ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಹಿಂವಕ 529 ಬಿಇಟಿ 2015, ಬೆಂಗಳೂರು, ದಿನಾಂಕ:07.11.2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ವೃಂದ ಮತ್ತು ನೇಮಕಾತಿ ವಿನಿಯಮಗಳು–2011ರ ಷೆಡ್ಯೂಲ್–1ರಲ್ಲಿ ದ್ವಿತೀಯ ದರ್ಜೆ ಸಹಾಯಕರು ಕಮ್ ಕಂಪ್ಯೂಟರ್ ಆಪರೇಟರ್ ಹುದ್ದೆಗಳಿಗೆ ಪದವಿ ಪೂರ್ವ ಶಿಕ್ಷಣ ಪರೀಕ್ಷೆ ಅಥವಾ ಇದರ ತತ್ಸಮಾನ ವಿದ್ಯಾರ್ಹತೆಯನ್ನು ಅನುಬಂಧದಲ್ಲಿ ನೀಡಿರುವಂತೆ, ನಿಗಧಿಪಡಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಆರ್.ಎರೆಕುಪ್ಪಿ,**

ಸರ್ಕಾರದ ಅಧೀನ ಕಾರ್ಯದರ್ಶಿ–1,

ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ.

**PR. 689**

**SC.500**

## ಹಿಂದುಳಿದ ವರ್ಗಗಳ ಕಲ್ಯಾಣ ಸಚಿವಾಲಯ

**ವಿಷಯ:–** ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ವ್ಯಾಪ್ತಿಯಲ್ಲಿರುವ ಮೊರಾರ್ಜಿ ದೇಸಾಯಿ ವಸತಿ ಕಾಲೇಜುಗಳಿಗೆ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗಳನ್ನು ನೇರ ನೇಮಕಾತಿ ಮಾಡಲು ನೇಮಕಾತಿ ಸಮಿತಿಗೆ ಬದಲಾಗಿ ಕೆ.ಪಿ.ಎಸ್.ಸಿ. ಮೂಲಕ ಭರ್ತಿ ಮಾಡಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:–** ಕಾರ್ಯನಿರ್ವಾಹಕ ನಿರ್ದೇಶಕರು, ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘ, ಬೆಂಗಳೂರು ಇವರ ಪತ್ರ ಸಂಖ್ಯೆ:ಕವಶಿಸಸ/ಸಿಆರ್–07/2015–16, ದಿ:14.10.2015.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ, ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ವ್ಯಾಪ್ತಿಯಲ್ಲಿರುವ ಮೊರಾರ್ಜಿ ದೇಸಾಯಿ ವಸತಿ ಕಾಲೇಜುಗಳಿಗೆ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗಳನ್ನು ನೇರ ನೇಮಕಾತಿ ಮಾಡಲು ವೃಂದ ಮತ್ತು ನೇಮಕಾತಿ ವಿನಿಯಮಗಳು–2011 ಕ್ಕೆ ತಿದ್ದುಪಡಿ ಮಾಡಿ

ಅಧಿಸೂಚನೆಯನ್ನು ಹೊರಡಿಸಲಾಗಿದೆ. ಹಾಗೂ ಸದರಿ ಆದೇಶಕ್ಕೆ ಸರ್ಕಾರದ ಅನುಮೋದನೆಯನ್ನು ದಿ:19.12.2012 ರಲ್ಲಿ ನೀಡಲಾಗಿದೆ. ಸರ್ಕಾರಿ ಆದೇಶ ಸಂಖ್ಯೆ:ಸಕಇ 70 ಮೊದೇಶಾ 2010(ಪಿ), ದಿ:4.1.2012 ರಲ್ಲಿ ನೇಮಕಾತಿಯನ್ನು ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ಆಡಳಿತ ಮಂಡಳಿ ರಚಿಸುವ ಸಮಿತಿ ಮಾಡುವುದೆಂದು ತಿಳಿಸಲಾಗಿದೆ. ಪ್ರಸ್ತುತ ಸಂಘದ ವ್ಯಾಪ್ತಿಯಲ್ಲಿರುವ 26 ಮೊರಾರ್ಜಿ ದೇಸಾಯಿ ವಸತಿ ಪದವಿ ಪೂರ್ವ ಕಾಲೇಜುಗಳಿಗೆ ಮಂಜೂರಾಗಿರುವ ಬೋಧಕ ಮತ್ತು ಬೋಧಕೇತರ ಹುದ್ದೆಗಳನ್ನು ಕರ್ನಾಟಕ ಲೋಕಸೇವಾ ಆಯೋಗದ ಮೂಲಕ ನೇಮಕಾತಿ ಮಾಡಿಕೊಳ್ಳುವುದಕ್ಕೆ ಸಂಬಂಧಿಸಿದಂತೆ ಕಾರ್ಯಕಾರಿ ಆದೇಶ (Executive Order) ಹೊರಡಿಸುವಂತೆ ಕಾರ್ಯನಿರ್ವಾಹಕ ನಿರ್ದೇಶಕರು, ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘ, ಬೆಂಗಳೂರು ಇವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಹಿಂವಕ 527 ಬಿಇಟಿ 2015, ಬೆಂಗಳೂರು, ದಿನಾಂಕ:07–11–2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ವ್ಯಾಪ್ತಿಯಲ್ಲಿ ಪ್ರಸ್ತುತ 26 ಮೊರಾರ್ಜಿ ದೇಸಾಯಿ ವಸತಿ ಪದವಿ ಪೂರ್ವ ಕಾಲೇಜುಗಳಿಗೆ ಮಂಜೂರಾಗಿರುವ ಬೋಧಕ ಮತ್ತು ಬೋಧಕೇತರ ಹುದ್ದೆಗಳನ್ನು ಕರ್ನಾಟಕ ಲೋಕಸೇವಾ ಆಯೋಗದ ಮೂಲಕ ನಿಯಮಾನುಸಾರ ನೇರ ನೇಮಕಾತಿ ಮಾಡಿಕೊಳ್ಳಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಆರ್.ಎರೆಕುಪ್ಪಿ,**

**PR. 691** ಸರ್ಕಾರದ ಅಧೀನ ಕಾರ್ಯದರ್ಶಿ–1,

**SC.500** ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ.

## PERSONNEL AND ADMINISTRATIVE REFORMS SECRETARIAT

**Subject**: Writing of Performance Appraisal Report-determination of Authorities-reg.

**Read:**
1. Government order No. DPAR 137 SPS 2009, dated: 23.10.2009.
2. Letter No. 251/MD/KSPH & IDCL/2105, dated: 02.06.2015 of Sri. Seemant Kumar Singh, IPS, IGP & Executive Director, Karnataka State Police Housing & Infrastructure Development Corporation Limited, Bengaluru.

**GOVERNMENT ORDER NO: DPAR 111 SPS 2015, BENGALURU, DATED: 19.09.2015.**

The Government directs that in the Annexure to Government Order No: DPAR 137 SPS 2009, dated: 23.10.2009 read at (1) above, the existing entries at Sl No. 48 shall be modified as follows:

| Sl. No. | Name of the Post | Reporting Authority | Reviewing Authority | Accepting Authority |
|---|---|---|---|---|
| 48 | IGP & Executive Director, Karnataka State Police Housing & Infrastructure Development Corporation Limited, Bengaluru. | Additional Chief Secretary, Home Department. | Chief Secretary | Home Minister |

This order shall be applicable to PARs for the reporting year 2014-15 (ending 31.03.2015) & onwards.

BY ORDER AND IN THE NAME OF GOVERNOR OF KARNATAKA,

**Shivashankar Naik.L,**

Under Secretary to Government,

**PR. 701** DP & AR (Services-IV)

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ:** ಬೆಂಗಳೂರು ಕರಗ ಮಹೋತ್ಸವದ ಧ್ವಜಾರೋಹಣಕ್ಕೆ ಧ್ವಜದ ಮರವನ್ನು(ಬಿದಿರು) ಒದಗಿಸುವ ಕುರಿತು.

**ಓದಲಾಗಿದೆ:–** ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ(ಅರಣ್ಯ ಪಡೆ ಮುಖ್ಯಸ್ಥರು), ಬೆಂಗಳೂರು ರವರ ಪತ್ರ ಸಂಖ್ಯೆ:ಅಪ್ರಮುಅಸಂ(ಅಸಂನಿ)/ಬಿ3/ಸಿಆರ್–01/15–16/1499, ದಿನಾಂಕ:28.04.2015.

**ಪ್ರಸ್ತಾವನೆ:–**

ಮೇಲೆ ಓದಲಾದ ದಿನಾಂಕ:28.04.2015ರ ಪತ್ರದಲ್ಲಿ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ(ಅರಣ್ಯ ಪಡೆ ಮುಖ್ಯಸ್ಥರು), ಬೆಂಗಳೂರು ರವರು ಬೆಂಗಳೂರು ದಕ್ಷಿಣ ತಾಲ್ಲೂಕು, ಉತ್ತರಹಳ್ಳಿ ಹೋಬಳಿ, ಜರಗನಹಳ್ಳಿ ಗ್ರಾಮದ ವಹ್ನಿಕುಲ ಕ್ಷತ್ರಿಯ(ತಿಗಳರು) ಹಾಗೂ ಜರಗನಹಳ್ಳಿ ಗ್ರಾಮಾಭಿವೃದ್ಧಿ ಸಂಘದವರು ಮಾನ್ಯ ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಸಚಿವರಿಗೆ ಸಲ್ಲಿಸಿದ ಪತ್ರದಲ್ಲಿ ನೂರಾರು ವರ್ಷಗಳಿಂದ ಬೆಂಗಳೂರು ಕರಗದ ಅದಿಯಿಂದಲೂ ಜರಗನಹಳ್ಳಿ ಗ್ರಾಮಸ್ಥರು ಕರಗವನ್ನು ಆಚರಿಸುತ್ತಿದ್ದು ಕರಗದ ಧ್ವಜಾರೋಹಣ ಪ್ರಥಮ ಪೂಜೆಗೆ ಬಿದಿರನ್ನು ಒದಗಿಸಿಕೊಡಬೇಕೆಂದು ಕೋರುತ್ತಾ

ಸಂಪ್ರದಾಯದ ಪ್ರಕಾರ 65 ಗೆಣ್ಣುಗಳುಳ್ಳ ಹಸಿ ಬಿದಿರನ್ನು ಒದಗಿಸಲು ಕೋರಿರುತ್ತಾರೆಂದು, ಈ ಒಂದು ಹಸಿರು ಬಿದಿರನ್ನು ಲಭ್ಯತೆಗೆ ಅನುಗುಣವಾಗಿ ಚಾಲ್ತಿಯಲ್ಲಿರುವ ದರದಲ್ಲಿ ಪ್ರತಿ ವರ್ಷವು ಖಾಯಂ ಆಗಿ ಪಡೆಯಲು ಸರ್ಕಾರದ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಅಪಜೀ 70 ಎಫ್ಎಫ್ 2015, ಬೆಂಗಳೂರು, ದಿನಾಂಕ: 30.09.2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಬೆಂಗಳೂರು ಕರಗ ಮಹೋತ್ಸವದ ಧ್ವಜಾರೋಹಣಕ್ಕೆ 65 ಗೆಣ್ಣುಗಳುಳ್ಳ ಹಸಿ ಬಿದಿರನ್ನು(ಬೊಂಬು)ಲಭ್ಯತೆಗೆ ಅನುಗುಣವಾಗಿ ಹಾಗೂ ಚಾಲ್ತಿಯಲ್ಲಿರುವ ದರದಲ್ಲಿ ಇನ್ನು ಮುಂದೆ ಪ್ರತಿ ವರ್ಷವೂ ಬೆಂಗಳೂರು ದಕ್ಷಿಣ ತಾಲ್ಲೂಕು ಉತ್ತರಹಳ್ಳಿ ಹೋಬಳಿ, ಜರಗನಹಳ್ಳಿ ಗ್ರಾಮದ ವಹ್ನಿಕುಲ ಕ್ಷತ್ರಿಯ(ತಿಗಳರು) ಹಾಗೂ ಜರಗನಹಳ್ಳಿ ಗ್ರಾಮಾಭಿವೃದ್ಧಿ ಸಂಘ ಬೆಂಗಳೂರು ಇವರಿಗೆ ನೀಡುವಂತೆ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಅಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಎಸ್.ಭಾಗ್ಯಲಕ್ಷ್ಮಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ

**PR. 684**

**SC. 100**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಸರ್ಕಾರಿ ನೌಕರರು ಮಾನ್ಯತೆ ಹೊಂದಿರದ ರಾಜ್ಯದ ಖಾಸಗಿ ಆಸ್ಪತ್ರೆಗಳಲ್ಲಿ ಪಡೆದ ರೂ.2.00 ಲಕ್ಷಗಳವರೆಗಿನ ವೈದ್ಯಕೀಯ ವೆಚ್ಚವನ್ನು ಮರುಪಾವತಿಸಲು ಸರ್ಕಾರದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರ ಮಿತಿಯನ್ನು ಹೊರರಾಜ್ಯದ ಖಾಸಗಿ ಆಸ್ಪತ್ರೆಗಳಲ್ಲಿ ಚಿಕಿತ್ಸೆ ಪಡೆದ ಪ್ರಕರಣಗಳಿಗೂ ವಿಸ್ತರಿಸುವ ಕುರಿತು.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 34 ಎಸ್ಎಂಆರ್ 2011, ದಿ:28.09.2011.

2) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 31 ಎಸ್ಎಂಆರ್ 2014, ದಿ:05.11.2014.

**ಪ್ರಸ್ತಾವನೆ:**

ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) ನಿಯಮಗಳು, 1963ರ ನಿಯಮ 8 ಮತ್ತು ನಿಯಮ 14(3)ಕ್ಕೆ ಸಂಬಂಧಪಟ್ಟ ಷೆಡ್ಯೂಲ್– I ಹಾಗೂ IIರಲ್ಲಿ ಸೂಚಿಸಿರುವ ಸರ್ಕಾರದಿಂದ ಮಾನ್ಯತೆ ಹೊಂದಿರುವ ಆಸ್ಪತ್ರೆಗಳನ್ನು ಹೊರತುಪಡಿಸಿ, ಮಾನ್ಯತೆ ಹೊಂದಿರದ ರಾಜ್ಯದಲ್ಲಿರುವ ಖಾಸಗಿ ಆಸ್ಪತ್ರೆಗಳಲ್ಲಿ ಸರ್ಕಾರಿ ನೌಕರರು ಪಡೆಯುವ ವೈದ್ಯಕೀಯ ಚಿಕಿತ್ಸಾ ವೆಚ್ಚವನ್ನು ವಿಶೇಷ ಪ್ರಕರಣವೆಂದು ಪರಿಗಣಿಸಿ, ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರು ನೀಡುವ ಅಭಿಪ್ರಾಯದಂತೆ ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) ನಿಯಮಗಳು, 1963ರ ನಿಯಮ 31ರಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ನಿಯಮ 14ನ್ನು ಸಡಿಲಿಸಿ, ಅರ್ಹತಾ ಮೊತ್ತ ರೂ.1.00 ಲಕ್ಷದವರೆಗಿನ ವೈದ್ಯಕೀಯ ವೆಚ್ಚವನ್ನು ಮರುಪಾವತಿಸಲು ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಸಂಬಂಧಪಟ್ಟ ಆಡಳಿತ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಲಾಗಿದ್ದ ಅಧಿಕಾರ ಮಿತಿಯನ್ನು ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶದನ್ವಯ ರೂ.2.00 ಲಕ್ಷಗಳಿಗೆ (ಎರಡು ಲಕ್ಷ ರೂಪಾಯಿಗಳು) ಹೆಚ್ಚಿಸಲಾಗಿದೆ. ಸದರಿ ಆದೇಶದಲ್ಲಿ ಸರ್ಕಾರದಿಂದ ಮಾನ್ಯತೆ ಪಡೆಯದ ಖಾಸಗಿ ಆಸ್ಪತ್ರೆಗಳಲ್ಲಿ ಚಿಕಿತ್ಸೆ ಪಡೆದು ರಾಜ್ಯ ಸರ್ಕಾರಿ ನೌಕರರು ಮರುಪಾವತಿಗಾಗಿ ಸಲ್ಲಿಸುವ ಎಲ್ಲಾ ಕ್ಲೇಮುಗಳನ್ನು ಯಾಂತ್ರಿಕವಾಗಿ ಪರಿಗಣಿಸದೇ ಅಪವಾದಾತ್ಮಕವಾದ ಪ್ರಕರಣವಾಗಿ ಪರಿಗಣಿಸಿ, ಸರ್ಕಾರಿ ನೌಕರರ ಮತ್ತು ಅವರ ಕುಟುಂಬದ ಸದಸ್ಯರ ಜೀವನ್ಮರಣದ ಸನ್ನಿವೇಶದಲ್ಲಿ ಹಾಗೂ ಕೆಲವು ತುರ್ತು ಸಂದರ್ಭಗಳಲ್ಲಿ ಮಾನ್ಯತೆ ಪಡೆಯದ ಖಾಸಗಿ ಆಸ್ಪತ್ರೆಗಳಲ್ಲಿ ಚಿಕಿತ್ಸೆ ಪಡೆದಂತಹ ಪ್ರಕರಣಗಳನ್ನು ಮಾತ್ರ ನಿಯಮ ಸಡಿಲಿಸಲು ಪರಿಗಣಿಸಬೇಕೆಂದು ಸೂಚಿಸಲಾಗಿದೆ.

ಆದರೆ ಸದರಿ ಅಧಿಕಾರ ಪ್ರತ್ಯಾಯೋಜನೆಯು ಸರ್ಕಾರದಿಂದ ಮಾನ್ಯತೆ ಹೊಂದಿರದ ರಾಜ್ಯದಲ್ಲಿರುವ ಖಾಸಗಿ ಆಸ್ಪತ್ರೆಗಳಲ್ಲಿ ರಾಜ್ಯ ಸರ್ಕಾರಿ ನೌಕರರು ಹಾಗೂ ಅವರ ಕುಟುಂಬದ ಸದಸ್ಯರು ಚಿಕಿತ್ಸೆ ಪಡೆದ ಪ್ರಕರಣಗಳಿಗೆ ಮಾತ್ರ ಅನ್ವಯವಾಗಲಿದ್ದು, ಹೊರ ರಾಜ್ಯದಲ್ಲಿರುವ ಖಾಸಗಿ ಆಸ್ಪತ್ರೆಗಳಲ್ಲಿ ಚಿಕಿತ್ಸೆ ಪಡೆದ ಪ್ರಕರಣಗಳಿಗೆ ಅನ್ವಯವಾಗುವುದಿಲ್ಲ. ರಾಜ್ಯ ಸರ್ಕಾರಿ ನೌಕರರು ಹಾಗೂ ಅವರ ಕುಟುಂಬದ ಸದಸ್ಯರು ಹೊರ ರಾಜ್ಯದಲ್ಲಿರುವ ಖಾಸಗಿ ಆಸ್ಪತ್ರೆಗಳಲ್ಲಿ ಚಿಕಿತ್ಸೆ ಪಡೆದ ಎಲ್ಲಾ ಮರುಪಾವತಿ ಪ್ರಕರಣಗಳು ನಿಯಮ ಸಡಿಲಿಕೆಗಾಗಿ ಆಡಳಿತ ಇಲಾಖೆಗಳ ಮೂಲಕ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು)ಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಸ್ವೀಕೃತವಾಗುತ್ತಿದ್ದು, ಇದರಿಂದಾಗಿ, ವೈದ್ಯಕೀಯ ವೆಚ್ಚ ಮರುಪಾವತಿಯು ವಿಳಂಬವಾಗಿ ಸರ್ಕಾರಿ ನೌಕರರಿಗೆ ಅನಾನುಕೂಲವಾಗುತ್ತಿರುವುದನ್ನು ಪರಿಗಣಿಸಿ, ಆಡಳಿತ ಇಲಾಖೆಗಳ ಸರ್ಕಾರದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಗಳಿಗೆ ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಪ್ರತ್ಯಾಯೋಜಿಸಲಾಗಿರುವ ರೂ.2.00 ಲಕ್ಷದವರೆಗಿನ ವೈದ್ಯಕೀಯ ವೆಚ್ಚದ ಮರುಪಾವತಿ ಅಧಿಕಾರವನ್ನು, ಸದರಿ ಆದೇಶದಲ್ಲಿ ವಿಧಿಸಿರುವ ಎಲ್ಲಾ ಷರತ್ತು ಮತ್ತು ನಿಬಂಧನೆಗಳಿಗೊಳಪಡಿಸಿ, ರಾಜ್ಯ ಸರ್ಕಾರಿ ನೌಕರರು ಹಾಗೂ ಅವರ ಕುಟುಂಬದ ಸದಸ್ಯರು ಹೊರ ರಾಜ್ಯದಲ್ಲಿರುವ ಖಾಸಗಿ ಆಸ್ಪತ್ರೆಗಳಲ್ಲಿ ಚಿಕಿತ್ಸೆ ಪಡೆದ ಪ್ರಕರಣಗಳಿಗೂ ವಿಸ್ತರಿಸಲು ತೀರ್ಮಾನಿಸಲಾಗಿದೆ.

ಅದರಂತೆ, ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 31 ಎಸ್ಎಂಆರ್ 2014, ಬೆಂಗಳೂರು, ದಿ: 05.11.2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಸರ್ಕಾರದಿಂದ ಮಾನ್ಯತೆ ಹೊಂದಿರುವ ಆಸ್ಪತ್ರೆಗಳನ್ನು ಹೊರತುಪಡಿಸಿ, ಮಾನ್ಯತೆ ಹೊಂದಿರದ ರಾಜ್ಯದಲ್ಲಿರುವ ಖಾಸಗಿ ಆಸ್ಪತ್ರೆಗಳಲ್ಲಿ ರಾಜ್ಯ ಸರ್ಕಾರಿ ನೌಕರರು ಹಾಗೂ ಅವರ ಕುಟುಂಬದ ಸದಸ್ಯರು ಚಿಕಿತ್ಸೆ ಪಡೆದ ಪ್ರಕರಣಗಳ ವೈದ್ಯಕೀಯ ವೆಚ್ಚವನ್ನು ವಿಶೇಷ ಪ್ರಕರಣವೆಂದು ಪರಿಗಣಿಸಿ, ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರು ನೀಡುವ ಅಭಿಪ್ರಾಯದಂತೆ ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) ನಿಯಮಗಳು, 1963ರ ನಿಯಮ 31ರಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ನಿಯಮ 14ನ್ನು ಸಡಿಲಿಸಿ ಅರ್ಹತಾ ಮೊತ್ತ ರೂ.2.00 ಲಕ್ಷದವರೆಗಿನ ವೈದ್ಯಕೀಯ ವೆಚ್ಚವನ್ನು ಮರುಪಾವತಿಸಲು ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 31 ಎಸ್ಎಂಆರ್ 2014 ದಿನಾಂಕ 05.11.2014ರಲ್ಲಿ ಸಂಬಂಧಪಟ್ಟ ಆಡಳಿತ ಇಲಾಖೆಯ ಸರ್ಕಾರದ ಪ್ರಧಾನ

ಕಾರ್ಯದರ್ಶಿ/ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರವನ್ನು ಸದರಿ ಆದೇಶದಲ್ಲಿ ವಿಧಿಸಿರುವ ಎಲ್ಲಾ ಷರತ್ತು ಮತ್ತು ನಿಬಂಧನೆಗಳಿಗೊಳಪಡಿಸಿ, ರಾಜ್ಯ ಸರ್ಕಾರಿ ನೌಕರರು ಹಾಗೂ ಅವರ ಕುಟುಂಬದ ಸದಸ್ಯರು ಹೊರ ರಾಜ್ಯದಲ್ಲಿರುವ ಖಾಸಗಿ ಆಸ್ಪತ್ರೆಗಳಲ್ಲಿ ಚಿಕಿತ್ಸೆ ಪಡೆದ ಪ್ರಕರಣಗಳಿಗೂ ವಿಸ್ತರಿಸಿ ಆದೇಶಿಸಲಾಗಿದೆ. ಸದರಿ ಅಧಿಕಾರ ಪ್ರತ್ಯಾಯೋಜನೆಯು ಈ ಆದೇಶವನ್ನು ಹೊರಡಿಸಿದ ದಿನಾಂಕದ ನಂತರ ಚಿಕಿತ್ಸೆ ಪಡೆದಿರುವ ಪ್ರಕರಣಗಳಿಗೆ ಅನ್ವಯವಾಗತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ: ಆಇ 481 ಆನಿ 2015 ದಿ: 20.08.2015 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಉಮಾ. ಕೆ.**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

(ಸೇವಾ ನಿಯಮಗಳು–2).

**PR. 692**

**SC. 200**

## ಸಹಕಾರ ಸಚಿವಾಲಯ

**ವಿಷಯ:** ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ಕಾತರಕಿ, ಬಾದಾಮಿ ತಾಲ್ಲೂಕು, ಬಾಗಲಕೋಟೆ ಜಿಲ್ಲೆ ಇದರ 2008–09 ರಿಂದ 2010–11 ನೇ ಸಾಲಿನ ಪರಿಶೋಧಿತ ಲೆಕ್ಕಪತ್ರಗಳನ್ನು ಮರುಲೆಕ್ಕಪರಿಶೋಧನೆಗೆ ಒಳಪಡಿಸುವ ಬಗ್ಗೆ.

**ಓದಲಾಗಿದೆ:** ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರ ಪತ್ರ ಸಂಖ್ಯೆ: ತಪಫ/ಬೆವಿ/3/2014–15, ದಿನಾಂಕ:22–01–2015

**ಪ್ರಸ್ತಾವನೆ :**

ಮೇಲೆ ಓದಲಾದ ಸಹಕಾರ ಸಂಘಗಳ ಲೆಕ್ಕ ಪರಿಶೋಧನಾ ನಿರ್ದೇಶಕರ ಪತ್ರದಲ್ಲಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ಕಾತರಕಿ, ಬಾದಾಮಿ ತಾಲ್ಲೂಕು, ಬಾಗಲಕೋಟೆ ಜಿಲ್ಲೆ ಇದರ 2008–09 ರಿಂದ 2010–11 ನೇ ಸಾಲುಗಳ ಪರಿಶೋಧಿತ ಲೆಕ್ಕಪತ್ರಗಳನ್ನು ಮರುಲೆಕ್ಕಪರಿಶೋಧನೆಗೆ ಒಳಪಡಿಸಲು ಸರ್ಕಾರಕ್ಕೆ ಮನವಿ ಬಂದ ಹಿನ್ನಲೆಯಲ್ಲಿ ಈ ಬಗ್ಗೆ ಉಪ ನಿರ್ದೇಶಕರು, ಬಿಜಾಪುರ ಜಿಲ್ಲೆ ಇವರ ಅಭಿಪ್ರಾಯ ಕೋರಲಾಗಿದ್ದು, ಸದರಿಯವರು 2008–09 ರಿಂದ 2010–11 ರ ಅವಧಿಯ ಲೆಕ್ಕಪರಿಶೋಧನೆಯನ್ನು ಈ ಕೆಳಕಂಡ ಅಂಶಗಳ ಹಿನ್ನಲೆಯಲ್ಲಿ ಮರು ಲೆಕ್ಕಪರಿಶೋಧನೆಗೆ ಒಳಪಡಿಸುವುದು ಸೂಕ್ತವೆಂದು ಅಭಿಪಾಯ ಪಟ್ಟಿರುವುದಾಗಿ ತಿಳಿಸಿ ಮರುಲೆಕ್ಕಪರಿಶೋಧನೆ ಕೈಗೊಳ್ಳಲು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 63 (13)ರಂತೆ ಆದೇಶವನ್ನು ಹೊರಡಿಸುವಂತೆ ಕೋರಿ ಸರ್ಕಾರಕ್ಕೆ ಪ್ರಸ್ತಾವೆ ಸಲ್ಲಿಸಿರುತ್ತಾರೆ.

1) 2009–10 ನೇ ಸಾಲಿನಲ್ಲಿ ಲೆಕ್ಕಪರಿಶೋಧನಾ ಅಧಿಕಾರಿಗಳು ಡಿ.ಸಿ.ಸಿ. ಬ್ಯಾಂಕ್ ಎಸ್.ಬಿ. ಖಾತೆಯಲ್ಲಿ (ಜಮಾ) ತೆಗೆದುಕೊಂಡು ಸದಸ್ಯರ ಲೆಕ್ಕಕ್ಕೆ ಜಮಾ ಕೊಡುವುದರ ಬದಲು ಬಿ.ಕೆ.ಸಿ.ಸಿ. ಸಾಲವೆಂದು ತೋರಿಸಿ ಅಢಾವೆ ಪತ್ರಿಕೆಯಲ್ಲಿ ಜಮಾ ಖರ್ಚು ತಪ್ಪಾಗಿದೆಯೆಂದು ಆರೋಪಿಸಿರುವ ಸಂಬಂಧ ಉಪನಿರ್ದೇಶಕರು ಸಲ್ಲಿಸಿರುವ ವರದಿ ಪುಟ–5 ಕಂಡಿಕೆ 4ರಲ್ಲಿ ನೀಡಿರುವ ವಿವರಣೆಯಂತೆ ಈ ಮೊಬಲಗು ಸದರಿ ಸಾಲಿನಲ್ಲಿ ಜಮಾ ಖರ್ಚು ಆಗಿರುವ ಬಗ್ಗೆ ವಿವರಣೆಗಳಿಲ್ಲದೆ ಇರುವುದನ್ನು ತಿಳಿಸಿರುತ್ತಾರೆ.

2) 2010–11 ನೇ ಸಾಲಿನಲ್ಲಿ ರೂ 1,08,83,931.00 ಗಳನ್ನು ದುರುಪಯೋಗವೆಂದು ಸಂಘದ ಮಾಜಿ ಕಾರ್ಯದರ್ಶಿಯವರಾದ ಎನ್.ಆರ್. ಕಂಬಲಿಯವರಿಗೆ (ನಿವೃತ್ತಿ) ಸ್ವಾಭಾವಿಕ ನ್ಯಾಯತತ್ವಗಳಡಿ ಅವಕಾಶ ನೀಡದೇ ತೋರಿಸಿರುವುದು.

3) ಗೊಬ್ಬರ ಮಾರಾಟ ಬಾಬ್ತು ವಸೂಲಾತಿಗೆ ಇಟ್ಟಿರುವ ರೂ 11,43,535.00 ಗಳ ಬಗ್ಗೆ ಲೆಕ್ಕಪರಿಶೋಧನಾ ವರದಿಯಲ್ಲಿ ನೀಡಿರುವ ವಿವರಣೆಯು ಸಮಂಜಸವಾಗಿಲ್ಲದಿರುವುದು.

4) ಬಿನ್ ಶೇತ್ಕಿ ಸಾಲದ ಬಾಬ್ತು ರೂ 3,01,000.00/–ಗಳು ಬಹಳ ವರ್ಷಗಳಿಂದ ವಸೂಲಾಗದೇ ಇರುವುದರಿಂದ ಶ್ರೀ ಎನ್. ಆರ್. ಕಂಬಳಿ ಇವರಿಂದ ವಸೂಲಾತಿಗೆ ಸೂಚಿಸಿರುವುದು.

ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 80 ಸಿಎಲ್ಎಂ 2015, ಬೆಂಗಳೂರು, ದಿನಾಂಕ: 16–04–2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ಕಾತರಕಿ, ಬಾದಾಮಿ ತಾಲ್ಲೂಕು, ಬಾಗಲಕೋಟೆ ಜಿಲ್ಲೆ ಇದರ 2008–09 ರಿಂದ 2012–13 ರ ಸಾಲಿನ ಪರಿಶೋಧಿತ ಲೆಕ್ಕಪತ್ರಗಳನ್ನು **ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಉಪನಿರ್ದೇಶಕರು, ಬಿಜಾಪುರ ಜಿಲ್ಲೆ, ಬಿಜಾಪುರ** ಇವರನ್ನು ನಿಯೋಜಿಸಿ, ಪುನರ್ ಲೆಕ್ಕಪರಿಶೋಧನೆ ನಡೆಸಲು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ, 1959, ಕಲಂ 63 (13) ರೀತ್ಯ ಸಹಕಾರ ಸಂಘಗಳ ಲೆಕ್ಕ ಪರಿಶೋಧನಾ ನಿರ್ದೇಶಕರಿಗೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ.

**ಎಂ. ವೆಂಕಟಸ್ವಾಮಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ

ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ,

ಸಹಕಾರ ಇಲಾಖೆ.

**PR. 695**

**SC. 50**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಶ್ರೀ ಕೆ. ಮುನಿರಾಜು, ದಿನಗೂಲಿ ವಾಹನ ಚಾಲಕ, ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಕಛೇರಿ, ಇವರಿಗೆ ಗೌರವಧನ ನೀಡುವ ಬಗ್ಗೆ.

**ಓದಲಾಗಿದೆ:** 1) ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ಕಡತ ಸಂಖ್ಯೆ: ಅಪಜೀ 84 ಅಅಸೇ 2015.

2) ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 132 ಸಅಸೇ 2011, ದಿನಾಂಕ:07–05–2012.

**ಪ್ರಸ್ತಾವನೆ:–**

ಮೇಲಿನ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ಕಡತದಲ್ಲಿ ಶ್ರೀ ಕೆ. ಮುನಿರಾಜು, ಬೆಂಗಳೂರು ನಗರ, ವಿಭಾಗದ ವ್ಯಾಪ್ತಿಯ ಕಗ್ಗಲೀಪುರ ಅರಣ್ಯ ವಲಯದಲ್ಲಿ ದಿನಗೂಲಿ ಆಧಾರದ ಮೇಲೆ ವಾಹನ ಚಾಲಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದ ಇವರನ್ನು ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಆಪ್ತ ಶಾಖೆಯ ವಾಹನ ಚಾಲಕರಾಗಿ ಅನ್ಯ ಕರ್ತವ್ಯದ ನಿಮಿತ್ತ(On office duty) ನೇಮಿಸಲಾಗಿದ್ದು, ಸದರಿಯವರು ಮುಖ್ಯ ಕಾರ್ಯದರ್ಶಿಯವರ ಆಪ್ತ ಶಾಖೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿ/ನೌಕರರಿಗೆ ಕರ್ನಾಟಕ ವಿಧಾನ ಮಂಡಲದ ಅಧಿವೇಶನ ನಡೆಯುವ ಅವಧಿಗೆ ಮಂಜೂರು ಮಾಡಿರುವ ಗೌರವಧನವನ್ನು ವಿಸ್ತರಿಸುವಂತೆ ಕೋರಿರುವ ಸಂಬಂಧ ಸದರಿಯವರಿಗೂ ಸಹ ಗೌರವಧನವನ್ನು ಪಾವತಿಸಬಹುದೇ ಎಂಬ ಬಗ್ಗೆ ಸ್ಪಷ್ಟೀಕರಣ ಕೋರಿರುತ್ತಾರೆ.

ಮೇಲಿನ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಆದೇಶದಲ್ಲಿ ಮಾನ್ಯ ಮುಖ್ಯಮಂತ್ರಿಗಳ ಸಚಿವಾಲಯದಲ್ಲಿ ಗುತ್ತಿಗೆ ಆಧಾರದ ಮೇಲೆ ವಿವಿಧ ವೃಂದಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಅಧಿಕಾರಿ/ನೌಕರರುಗಳಿಗೆ ಕರ್ನಾಟಕ ವಿಧಾನ ಮಂಡಲದ ಅಧಿವೇಶನ ನಡೆಯುವ ಅವಧಿಗೆ ಮಾತ್ರ ಅನ್ವಯವಾಗುವಂತೆ ಗೌರವಧನವನ್ನು ದಿನವೊಂದಕ್ಕೆ ರೂ.250/– ಗಳಿಗೆ ಹೆಚ್ಚಿಸಿ ಆದೇಶಿಸಿದೆ. ಅಲ್ಲದೇ, ಮುಂಬರುವ ಅಧಿವೇಶನಗಳಿಗೆ ರೂ.375/– ಗಳಿಗೆ ಹೆಚ್ಚಿಸಿ ಗೌರವಧನವನ್ನು ಪಾವತಿಸಲು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 285 ಸೇ.2 2014, ದಿನಾಂಕ:14–10–2015 ರಲ್ಲಿ ಸಹಮತಿ ನೀಡಿರುತ್ತದೆ. ಈ ಸಂಬಂಧ ಕಡತ ಸಂಖ್ಯೆ:ಸಿಆಸುಇ 710 ಸಅಸೇ 2013 ರಲ್ಲಿ ಪರಿಶೀಲಿಸಲಾಗುತ್ತಿದೆ.

ಈ ಹಿನ್ನೆಲೆಯಲ್ಲಿ ಶ್ರೀ ಕೆ. ಮುನಿರಾಜು, ದಿನಗೂಲಿ ವಾಹನ ಚಾಲಕ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ, ಪ್ರಸ್ತುತ ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಆಪ್ತ ಶಾಖೆ, ಇವರಿಗೂ ಸಹ ಕಳೆದ ಎರಡು ವಿಧಾನ ಮಂಡಲದ ಅಧಿವೇಶನದ ದಿನವೊಂದಕ್ಕೆ ರೂ.250/– ರಂತೆ ಹಾಗೂ ಮುಂದಿನ ಅಧಿವೇಶನದಿಂದ ದಿನವೊಂದಕ್ಕೆ ರೂ.375/– ರಂತೆ ಪಾವತಿಸಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 468 ಸಉಸೇ 2015, ಬೆಂಗಳೂರು, ದಿನಾಂಕ:13ನೇ ನವೆಂಬರ್, 2015.**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಕೆ. ಮುನಿರಾಜು, ದಿನಗೂಲಿ ವಾಹನ ಚಾಲಕ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ, ಪ್ರಸ್ತುತ ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಆಪ್ತ ಶಾಖೆ, ಇವರಿಗೆ ಮಾನ್ಯ ಮುಖ್ಯಮಂತ್ರಿಯವರ ಸಚಿವಾಲಯದಲ್ಲಿ ಗುತ್ತಿಗೆ ಆಧಾರದ ಮೇಲೆ ಕರ್ತವ್ಯ ನಿರ್ವಹಿಸುತ್ತಿರುವ ಸಿಬ್ಬಂದಿಗಳಿಗೆ ಕರ್ನಾಟಕ ವಿಧಾನ ಮಂಡಲದ ಅಧಿವೇಶನದ ಸಮಯದಲ್ಲಿ ನೀಡಲಾಗುತ್ತಿರುವ ಗೌರವಧನವನ್ನು ದಿನವೊಂದಕ್ಕೆ ರೂ.250/– ಗಳನ್ನು ಪಾವತಿಸುತ್ತಿರುವಂತೆಯೇ ಸದರಿಯವರಿಗೂ ಸಹ ಈ ಹಿಂದಿನ ಎರಡು ಅಧಿವೇಶನಗಳಿಗೆ ಮಾತ್ರ ದಿನವೊಂದಕ್ಕೆ ರೂ.250/–(ಎರಡು ನೂರ ಐವತ್ತು ಮಾತ್ರ)ಗಳನ್ನು ಹಾಗೂ ಮುಂದಿನ ಅಧಿವೇಶನದಿಂದ ದಿನವೊಂದಕ್ಕೆ ರೂ.375/–(ಮೂರು ನೂರ ಎಪ್ಪತ್ತೈದು ಮಾತ್ರ)ಗಳಂತೆ ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುವ ಅವಧಿಯವರೆಗೆ ಮಾತ್ರ ಮಂಜೂರು ಮಾಡಿ ಆದೇಶಿಸಿದೆ.

ಆರ್ಥಿಕ ಇಲಾಖೆಯು ಇದನ್ನೊಂದು ವಿಶೇಷ ಪ್ರಕರಣವೆಂದು ಪರಿಗಣಿಸಿರುವ ಹಿನ್ನೆಲೆಯಲ್ಲಿ ಈ ಆದೇಶವನ್ನು ಯಾವುದೇ ಪೂರ್ವ ನಿದರ್ಶನವಾಗಿ ಪರಿಗಣಿಸಲು ಅವಕಾಶವಿರುವುದಿಲ್ಲ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಎಫ್‌ಡಿ 719 ಸೇ–2/2015, ದಿನಾಂಕ:11–11–2015 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಾ॥ ಗೀತಾ ಎಲ್.**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–3)

**PR. 707**

## ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ:** ಕರ್ನಾಟಕ ಅರಣ್ಯ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿರುವ ಅರಣ್ಯ ಪ್ರೇರಕರ ಮಾಸಿಕ ಗೌರವಧನವನ್ನು ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:**

1. ದಿನಾಂಕ: 13.11.1984 ರ ಆದೇಶ ಸಂಖ್ಯೆ: FFD 045 FAD 84.
2. ದಿನಾಂಕ: 29.07.1984 ರ ಆದೇಶ ಸಂಖ್ಯೆ: FFD 104 FAD 86.
3. ದಿನಾಂಕ: 04.05.2011 ರ ಆದೇಶ ಸಂಖ್ಯೆ: FFD 099 FAP 2010.
4. ಸರ್ಕಾರದ ಆದೇಶ ಸಂಖ್ಯೆ: ಅಪಜೀ 031 ಅಅಸೇ 2013, ದಿನಾಂಕ: 10.10.2013.
5. ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯವರ ಪತ್ರ ಸಂಖ್ಯೆ: ಬಿ6/ದಿನಗೂಲಿ/ಸಿಆರ್–55/1997–98, ದಿನಾಂಕ: 15.07.2015, 07.09.2015 ಮತ್ತು 30.10.2015.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿನ ಆದೇಶದಲ್ಲಿ ವಿಶ್ವ ಬ್ಯಾಂಕ್ ನೆರವಿನ ಸಾಮಾಜಿಕ ಅರಣ್ಯ ಯೋಜನೆಯಡಿ 1983–84ನೇ ಸಾಲಿನಲ್ಲಿ 1000 ಅರಣ್ಯ ಪ್ರೇರಕರನ್ನು ಅಂಶಕಾಲಿಕವಾಗಿ ಮತ್ತು ಸ್ವಯಂಪ್ರೇರಣೆಯ ಮೇಲೆ ಮಾಸಿಕ ರೂ. 250/– ಗಳ ಗೌರವಧನ ಪಾವತಿಸುವ ಆಧಾರದ ಮೇಲೆ ನೇಮಕ ಮಾಡಿಕೊಳ್ಳಲಾಗಿದೆ. ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಆದೇಶದಲ್ಲಿ ಮತ್ತೆ 500 ಅರಣ್ಯ ಪ್ರೇರಕರನ್ನು ಅಂಶಕಾಲಿಕವಾಗಿ ಮತ್ತು ಸ್ವಯಂ ಪ್ರೇರಣೆಯ ಮೇಲೆ ಮಾಸಿಕ ರೂ. 250/– ಗಳ ಗೌರವಧನ ಪಾವತಿಸುವ ಆಧಾರದ ಮೇಲೆ ನೇಮಕಮಾಡಿಕೊಳ್ಳಲಾಗಿದೆ.

1992 ರಲ್ಲಿ ಸಾಮಾಜಿಕ ಅರಣ್ಯ ಯೋಜನೆಯು ಅಂತ್ಯಗೊಂಡ ನಂತರ ಅರಣ್ಯ ಪ್ರೇರಕರ ಸೇವೆಯನ್ನು ಜವಾಹರ್ ರೋಜಗಾರ್ ಯೋಜನೆ, ಸಾಮಾಜಿಕ ಅರಣ್ಯ ಯೋಜನೆ 1997–98 ರಿಂದ 2005ನೇ ಸಾಲಿನವರೆಗೆ ಜೆ.ಬಿ.ಐ.ಸಿ. ನೆರವಿನ ಕರ್ನಾಟಕ ಪೂರ್ವ ಪ್ರಸ್ಥಭೂಮಿ, ಅರಣ್ಯೀಕರಣ ಮತ್ತು ಪರಿಸರ ಯೋಜನೆ 2005 ರಿಂದ 2013 ರವರೆಗೆ ಕರ್ನಾಟಕ ಸುಸ್ಥಿರ ಅರಣ್ಯ ನಿರ್ವಹಣೆ ಮತ್ತು ಜೀವಿ ವೈವಿಧ್ಯ ಸಂರಕ್ಷಣೆ ಯೋಜನೆಯಡಿ ಮುಂದುವರೆಸಲಾಗಿದ್ದು, ಪ್ರಸ್ತುತ ಈ ಯೋಜನೆಯಡಿ 911 ಅರಣ್ಯ ಪ್ರೇರಕ ಸಿಬ್ಬಂದಿಯು ಕಾರ್ಯನಿರ್ವಹಿಸುತ್ತಿರುವರು.

ಅರಣ್ಯ ಪ್ರೇರಕರಿಗೆ ನೀಡುತ್ತಿದ್ದ ಮಾಸಿಕ ಗೌರವಧನವು ಕಾಲಕಾಲಕ್ಕೆ ಹೆಚ್ಚಳವಾಗುತ್ತಿದ್ದು, ಮೇಲೆ ಓದಲಾದ ಕ್ರಮ ಸಂಖ್ಯೆ (3) ರಲ್ಲಿನ ಆದೇಶದಲ್ಲಿ ದಿನಾಂಕ: 01.04.2011 ರಿಂದ ಜಾರಿಗೆ ಬರುವಂತೆ ಪಾವತಿಸುತ್ತಿದ್ದ ರೂ. 2500/–ಗಳ ಮಾಸಿಕ ಗೌರವಧನವನ್ನು ರೂ. 3500/– ಗಳಿಗೆ ಹೆಚ್ಚಿಸಿ ಆದೇಶಿಸಲಾಗಿದೆ ಹಾಗೂ ಮೇಲೆ ಓದಲಾದ ಕ್ರಮ ಸಂಖ್ಯೆ (4) ರಲ್ಲಿನ ಆದೇಶದಲ್ಲಿ ದಿನಾಂಕ: 01.10.2013 ರಿಂದ ಜಾರಿಗೆ ಬರುವಂತೆ ಮಾಸಿಕ ಪಾವತಿಸುತ್ತಿದ್ದ ರೂ. 3500/–ಗಳ ಮಾಸಿಕ ಗೌರವಧನವನ್ನು ರೂ. 5500/– ಕ್ಕೆ ಹೆಚ್ಚಿಸಿ ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (5)ರ ಪತ್ರಗಳಲ್ಲಿ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು ಪ್ರಸ್ತುತ ಕಾರ್ಯ ನಿರ್ವಹಿಸುತ್ತಿರುವ ಅರಣ್ಯ ಪ್ರೇರಕರು ತಮ್ಮ ಮನವಿಯಲ್ಲಿ ತಿಳಿಸಿರುವಂತೆ 30 ವರ್ಷಗಳಿಂದ ಸತತವಾಗಿ ಕೆಲಸ ನಿರ್ವಹಿಸುತ್ತಿರುವುದರಿಂದ ಅವರುಗಳ ಮಕ್ಕಳ ವಿದ್ಯಾಭ್ಯಾಸ, ಕುಟುಂಬ ನಿರ್ವಹಣೆಗೆ ಪ್ರತಿ ಮಾಸಿಕ ರೂ. 15000/– ಗಳ ಮಾಸಿಕ ವೇತನವನ್ನು ನಿಗಧಿಪಡಿಸುವಂತೆ ಹಾಗೂ ಅರಣ್ಯ ಪ್ರೇರಕರನ್ನು ಪೂರ್ಣ ಕಾಲಿಕ ನೌಕರರೆಂದು ಪರಿಗಣಿಸಿ ಮುಂದುವರೆಸಿದಲ್ಲಿ ಮಾಸಿಕ ರೂ. 9750/– ರಂತೆ ಕನಿಷ್ಟ ಸಂಭಾವನೆಯನ್ನು ನಿಗಧಿಪಡಿಸುವಂತೆ ಕೋರಿರುತ್ತಾರೆಂದು ತಮ್ಮ ಪ್ರಸ್ತಾವನೆಯಲ್ಲಿ ತಿಳಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು, ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ ಅಪಜೀ 35 ಅಅಸೇ 2014, ಬೆಂಗಳೂರು ದಿನಾಂಕ: 20–11–2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಕರ್ನಾಟಕ ಅರಣ್ಯ ಇಲಾಖೆಯಲ್ಲಿ ಅರಣ್ಯ ಪ್ರೇರಕರಾಗಿ ಅಂಶಕಾಲಿಕ ಆಧಾರದ ಮೇಲೆ ಸೇವೆ ನಿರ್ವಹಿಸುತ್ತಿರುವ 911 ಅರಣ್ಯ ಪ್ರೇರಕರುಗಳಿಗೆ ಹಾಲಿ ನೀಡುತ್ತಿರುವ ಮಾಸಿಕ ಗೌರವಧನವನ್ನು ದಿನಾಂಕ: 01.04.2015 ರಿಂದ ಜಾರಿಗೆ ಬರುವಂತೆ ರೂ. 5500/– ರಿಂದ ರೂ. 7000/– ಕ್ಕೆ (ಏಳು ಸಾವಿರ) ಹೆಚ್ಚಿಸಿ ನಿಗಧಿಪಡಿಸಿದೆ. ಇದಕ್ಕೆ ತಗಲುವ ವೆಚ್ಚವನ್ನು ಯೋಜನೇತರ ಲೆಕ್ಕ ಶೀರ್ಷಿಕೆ "2406–01–001–2–01–General Establishment-015-Subsidiary Expenses" ಇದರಡಿಯ ಉಳಿತಾಯದ ಹಣದಿಂದಲೇ ಪ್ರಾದೇಶಿಕ/ಇತರೆ ವಿಭಾಗದಲ್ಲಿರುವ 393 ಜನ ಮತ್ತು ಸಾಮಾಜಿಕ ಅರಣ್ಯ ವಿಭಾಗಗಳಲ್ಲಿರುವ 518 ಜನ ಹೀಗೆ ಎರಡು ವಲಯದ ಒಟ್ಟು 911 ಜನ ಅರಣ್ಯ ಪ್ರೇರಕರಿಗೆ ರೂ. 765.24 ಲಕ್ಷವನ್ನು ಪಾವತಿಸಲು ಹಾಗೂ ಈ ಅನುದಾನವನ್ನು ಖಜಾನೆ ತಂತ್ರಾಂಶದಲ್ಲಿ ಸಾಮಾಜಿಕ ಅರಣ್ಯ ವಿಭಾಗಗಳ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಡಿ.ಡಿ.ಓ. ಸಂಖ್ಯೆಗೆ ದಾಖಲಿಸಲು ಮತ್ತು ಈ ಅನುದಾನವನ್ನು ಸಾದಿಲ್ವಾರು ಬಿಲ್ ಅಂದರೆ ಸಿಟಿಎಸ್–5 (ವೈಟ್ ಬಿಲ್) ಖಜಾನೆ ಬಿಲ್ಲಿನ ಮೂಲಕ ಡ್ರಾ ಮಾಡಲು ಸರ್ಕಾರದ ಮಂಜೂರಾತಿ ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 681 ವೆಚ್ಚ–5/2015, ದಿನಾಂಕ: 13.10.2015 ಹಾಗೂ ದಿನಾಂಕ: 18.11.2015ರ ಟಿಪ್ಪಣಿ ಸಂಖ್ಯೆ: ಆಇ 867 ವೆಚ್ಚ–5/2015 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಸಿ. ರಾಜೇಂದ್ರ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು)

ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ

**PR. 713**

**SC. 50**

## ಸಹಕಾರ ಸಚಿವಾಲಯ

**ವಿಷಯ:** 2015–16ನೇ ಸಾಲಿಗೆ ಗ್ರಾಮೀಣ ಯಶಸ್ವಿನಿ ಯೋಜನೆಯಡಿಯಲ್ಲಿ ಸೋಲಿಗ ಸಮುದಾಯದವರು ಲ್ಯಾಂಪ್ಸ್‌ನಲ್ಲಿ ನೋಂದಣಿಯಾಗಲು ನೋಂದಣಿ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** ಸರ್ಕಾರದ ಆದೇಶ ಸಂಖ್ಯೆ: ಸಿಒ/79/ಸಿಎಲ್ಎಸ್/2015, ದಿನಾಂಕ: 19/03/2015 ಮತ್ತು 30/07/2015.

**ಪ್ರಸ್ತಾವನೆ :**

2015–16ನೇ ಸಾಲಿನ ಯಶಸ್ವಿನಿ ಗ್ರಾಮೀಣ ಸಹಕಾರಿಗಳ ಆರೋಗ್ಯ ರಕ್ಷಣಾ ಯೋಜನೆಯಲ್ಲಿ ಸದಸ್ಯರ ನೋಂದಾವಣೆಗೆ ಮೇಲೆ ಓದಲಾದ ಸರ್ಕಾರಿ ಆದೇಶಗಳಂತೆ ಜಾರಿಗೊಳಿಸಿ ನೋಂದಣಿ ದಿನಾಂಕವನ್ನು ವಿಸ್ತರಿಸಿದ್ದು, ವಿಸ್ತರಿಸಿದ ಅವಧಿ ದಿನಾಂಕ: 31.09.2015ಕ್ಕೆ ಕೊನೆಗೊಂಡಿರುತ್ತದೆ. ಆದರೆ 2015–16ನೇ ಸಾಲಿನ ಬಜೆಟ್ ನಲ್ಲಿ ಘೋಷಿಸಿರುವಂತೆ ಸೋಲಿಗ ಸಮುದಾಯದವರಿಗೆ ಯಶಸ್ವಿನಿ ಯೋಜನೆಯಡಿಯಲ್ಲಿ ಸೌಲಭ್ಯವನ್ನು ನೀಡಬೇಕಾದ್ದರಿಂದ, ಯಶಸ್ವಿನಿ ಟ್ರಸ್ಟ್ ಸಭೆಯ ದಿನಾಂಕ: 15/10/2015ರ ತೀರ್ಮಾನದಂತೆ ಸೋಲಿಗ ಸಮುದಾಯದವರಿಗೆ ಮಾತ್ರ ಲ್ಯಾಂಪ್ಸ್ ಸಹಕಾರ ಸಂಘಗಳ ಮೂಲಕ ಯಶಸ್ವಿನಿ ಯೋಜನೆಯಡಿ ನೋಂದಾವಣೆಯಾಗಲು ನೋಂದಾವಣೆ ದಿನಾಂಕವನ್ನು ವಿಸ್ತರಿಸುವುದು ಅವಶ್ಯವಾಗಿರುತ್ತದೆ. ಆದ್ದರಿಂದ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ/384/ಸಿಎಲ್ಎಸ್/2015, ಬೆಂಗಳೂರು, ದಿನಾಂಕ: 16/11/2015.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ, ಯಶಸ್ವಿನಿ ಗ್ರಾಮೀಣ ಸಹಕಾರಿಗಳ ಆರೋಗ್ಯ ರಕ್ಷಣಾ ಯೋಜನೆಯಡಿಯಲ್ಲಿ ಸೋಲಿಗ ಸಮುದಾಯದ ಸದಸ್ಯರು ಲ್ಯಾಂಪ್ಸ್ ಸಹಕಾರ ಸಂಘದ ಮೂಲಕ ಯಶಸ್ವಿನಿ ಯೋಜನೆಯಡಿ ನೋಂದಾವಣೆಯಾಗಲು ನೋಂದಣಿ ಅವಧಿಯನ್ನು ದಿನಾಂಕ: 15/02/2016 ರವರೆಗೆ ವಿಸ್ತರಿಸಿ ಆದೇಶ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ.

**ಎಂ. ವೆಂಕಟಸ್ವಾಮಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ

ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ,

ಸಹಕಾರ ಇಲಾಖೆ.

PR. 693

SC. 50

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಮಾನ್ಯ ಮುಖ್ಯಮಂತ್ರಿಯವರ ಸಚಿವಾಲಯದಲ್ಲಿ ಗುತ್ತಿಗೆ ಆಧಾರದ ಮೇಲೆ ಕರ್ತವ್ಯ ನಿರ್ವಹಿಸುತ್ತಿರುವ ಸಿಬ್ಬಂದಿಗಳಿಗೆ ಗೌರವಧನವನ್ನು ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:**

1. ಮಾನ್ಯ ಮುಖ್ಯಮಂತ್ರಿಯವರ ಸಚಿವಾಲಯದಲ್ಲಿ ಗುತ್ತಿಗೆ ಆಧಾರದ ಮೇಲೆ ಕರ್ತವ್ಯ ನಿರ್ವಹಿಸುತ್ತಿರುವ ಸಿಬ್ಬಂದಿಗಳ ಮನವಿ ದಿನಾಂಕ: 29.07.2013.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 132 ಸಅಸೇ 2011, ದಿನಾಂಕ: 7.05.2012.

**ಪ್ರಸ್ತಾವನೆ :**

ಮೇಲಿನ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ಮನವಿಯಲ್ಲಿ ಮಾನ್ಯ ಮುಖ್ಯ ಮಂತ್ರಿಯವರ ಸಚಿವಾಲಯದಲ್ಲಿ ಗುತ್ತಿಗೆ ಆಧಾರದ ಮೇಲೆ ಕರ್ತವ್ಯ ನಿರ್ವಹಿಸುತ್ತಿರುವ ಸಿಬ್ಬಂದಿಗಳು ಕರ್ನಾಟಕ ವಿಧಾನ ಮಂಡಲದ ಅಧಿವೇಶನದ ಸಂದರ್ಭದಲ್ಲಿ ಮಾನ್ಯ ಮುಖ್ಯಮಂತ್ರಿಗಳ ಸಚಿವಾಲಯದಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಅಧಿಕಾರಿ/ನೌಕರರುಗಳಿಗೆ ಗೌರವಧನವನ್ನು ದಿನವೊಂದಕ್ಕೆ ರೂ. 500/–ರಂತೆ ನೀಡಲಾಗುತ್ತಿದ್ದು, ಗುತ್ತಿಗೆ ಆಧಾರದ ಮೇಲೆ ಕರ್ತವ್ಯ ನಿರ್ವಹಿಸುತ್ತಿರುವ ನೌಕರರಿಗೆ ಮಾತ್ರ ರೂ. 250/– ಗಳನ್ನು ಗೌರವಧನವನ್ನಾಗಿ ನೀಡಲಾಗುತ್ತಿದೆ. ಈ ವ್ಯತ್ಯಾಸವನ್ನು ಸರಿಪಡಿಸಿ ಗುತ್ತಿಗೆ ಆಧಾರದ ಮೇಲೆ ಕರ್ತವ್ಯ ನಿರ್ವಹಿಸುತ್ತಿರುವ ಸಿಬ್ಬಂದಿಗಳಿಗೂ ಅಧಿವೇಶನದ ಅವಧಿಗೆ ದಿನವೊಂದಕ್ಕೆ ರೂ. 500/–ಗಳಂತೆ ಗೌರವಧನವನ್ನು ಮಂಜೂರು ಮಾಡುವಂತೆ ಮಾನ್ಯ ಮುಖ್ಯಮಂತ್ರಿಯವರನ್ನು ಕೋರಿರುತ್ತಾರೆ. ಈ ಮನವಿಯ ಮೇಲೆ ಮಾನ್ಯ ಮುಖ್ಯಮಂತ್ರಿಯವರು ಕೂಡಲೇ ಪ್ರಸ್ತಾವನೆ ಸಲ್ಲಿಸುವಂತೆ ಸೂಚಿಸಿರುತ್ತಾರೆ.

ಮೇಲಿನ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ಆದೇಶದಲ್ಲಿ ಮಾನ್ಯ ಮುಖ್ಯಮಂತ್ರಿಗಳ ಸಚಿವಾಲಯದಲ್ಲಿ ಗುತ್ತಿಗೆ ಆಧಾರದ ಮೇಲೆ ವಿವಿಧ ವೃಂದಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಅಧಿಕಾರಿ/ನೌಕರರುಗಳಿಗೆ ಕರ್ನಾಟಕ ವಿಧಾನ ಮಂಡಲದ ಅಧಿವೇಶನ ನಡೆಯುವ ಅವಧಿಗೆ ಮಾತ್ರ ಅನ್ವಯವಾಗುವಂತೆ ಗೌರವಧನವನ್ನು ದಿನವೊಂದಕ್ಕೆ ರೂ.250/–ಗಳಿಗೆ ಹೆಚ್ಚಿಸಿ ಆದೇಶಿಸಿದೆ.

ಮಾನ್ಯ ಮುಖ್ಯಮಂತ್ರಿಯವರ ಸಚಿವಾಲಯದಲ್ಲಿ ಗುತ್ತಿಗೆ ಆಧಾರದ ಮೇಲೆ ಕರ್ತವ್ಯ ನಿರ್ವಹಿಸುತ್ತಿರುವ ಸಿಬ್ಬಂದಿಗಳ ಕೋರಿಕೆಯ ಹಿನ್ನೆಲೆಯಲ್ಲಿ ಮಾನ್ಯ ಮುಖ್ಯಮಂತ್ರಿಯವರ ಸಚಿವಾಲಯದಲ್ಲಿ ಗುತ್ತಿಗೆ ಆಧಾರದ ಮೇಲೆ ಕರ್ತವ್ಯ ನಿರ್ವಹಿಸುತ್ತಿರುವ ಸಿಬ್ಬಂದಿಗಳಿಗೆ ಕರ್ನಾಟಕ ವಿಧಾನ ಮಂಡಲದ ಅಧಿವೇಶನದ ಸಮಯದಲ್ಲಿ ನೀಡಲಾಗುತ್ತಿರುವ ಗೌರವಧನವನ್ನು ದಿನವೊಂದಕ್ಕೆ ರೂ. 250/–ಗಳಿಂದ ರೂ. 375/–ಗಳಿಗೆ ಹೆಚ್ಚಿಸಲು ಸರ್ಕಾರವು ತೀರ್ಮಾನಿಸಿ, ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 710 ಸಅಸೇ 2013, ಬೆಂಗಳೂರು, ದಿನಾಂಕ: 18ನೇ ನವೆಂಬರ್, 2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮಾನ್ಯ ಮುಖ್ಯಮಂತ್ರಿಯವರ ಸಚಿವಾಲಯದಲ್ಲಿ ಗುತ್ತಿಗೆ ಆಧಾರದ ಮೇಲೆ ಕರ್ತವ್ಯ ನಿರ್ವಹಿಸುತ್ತಿರುವ ಸಿಬ್ಬಂದಿಗಳಿಗೆ ಕರ್ನಾಟಕ ವಿಧಾನ ಮಂಡಲದ ಅಧಿವೇಶನದ ಸಮಯದಲ್ಲಿ ನೀಡಲಾಗುತ್ತಿರುವ ಗೌರವಧನವನ್ನು ದಿನವೊಂದಕ್ಕೆ ರೂ. 250/–ಗಳಿಂದ ರೂ. 375/–ಗಳಿಗೆ ಹೆಚ್ಚಿಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅಧಿಕೃತ ಟಿಪ್ಪಣಿ ಸಂಖ್ಯೆ: ಆಇ 285 ಸೇವೆಗಳು–2 2014, ದಿನಾಂಕ: 14.10.2015 ರಲ್ಲಿ ನೀಡಿದ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ.

**ಚಂದ್ರಶೇಖರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ.(ಸೇವೆಗಳು–6)

PR. 706

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಶ್ರೀ ಎಸ್.ಎಸ್. ಜಯಧರ್, ನಿವೃತ್ತ ಸರ್ಕಾರದ ಅಧೀನ ಕಾರ್ಯದರ್ಶಿ, ಇವರ ವಿರುದ್ಧದ ಇಲಾಖಾ ವಿಚಾರಣೆಯ – ಅಂತಿಮ ಆದೇಶ ಹೊರಡಿಸುವ ಬಗ್ಗೆ

**ಓದಲಾಗಿದೆ:**

1 ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿಆಸುಇ 113 ಸಅಸೇ 2012, ದಿನಾಂಕ: 17–08–2012.

2 ಅಧಿಸೂಚನೆ ಸಂಖ್ಯೆ: ಸಿಆಸುಇ 113 ಸಅಸೇ 2012, ದಿನಾಂಕ: 29–08–2012.

3 ಹಿಂಬರಹ ಸಂಖ್ಯೆ: ಸಿಆಸುಇ 663 ಸಅಸೇ 2012, ದಿನಾಂಕ: 18–10–2012.

4 ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 03 ಸೇಇವಿ 2013, ದಿನಾಂಕ: 25–06–2013.

5 ನೋಟೀಸ್ ಸಂಖ್ಯೆ: ಸಿಆಸುಇ 03 ಸೇಇವಿ 2013, ದಿನಾಂಕ: 17–08–2013.

6 ಅಧಿಕಾರಿಯವರ ಪ್ರತಿರಕ್ಷಣಾ ಹೇಳಿಕೆ ದಿನಾಂಕ: 23–08–2013.

7 ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 03 ಸೇಇವಿ 2013, ದಿನಾಂಕ: 21–10–2013.

8 ವಿಚಾರಣಾಧಿಕಾರಿಯವರ ಪತ್ರ ದಿನಾಂಕ 09–06–2015

9 ಎರಡನೇ ಕಾರಣ ಕೇಳುವ ನೋಟೀಸ್ ಸಂಖ್ಯೆ: ಸಿಆಸುಇ 03 ಸೇಇವಿ 2013, ದಿನಾಂಕ: 25–07–2015.

10 ಅಧಿಕಾರಿಯವರ ಲಿಖಿತ ಹೇಳಿಕೆಯ ದಿನಾಂಕ: 19–08–2015.

**ಪ್ರಸ್ತಾವನೆ:–**

ಶ್ರೀ ಎಸ್.ಎಸ್. ಜಯಧರ್, ನಿವೃತ್ತ ಅಧೀನ ಕಾರ್ಯದರ್ಶಿ, ಇವರನ್ನು ಮೇಲೆ (1)ರಲ್ಲಿ ಓದಲಾದ ಅಧಿಸೂಚನೆಯನ್ವಯ ಕರ್ನಾಟಕ ಮಾಹಿತಿ ಆಯೋಗದ ಅಧೀನ ಕಾರ್ಯದರ್ಶಿ ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸಿ ಆದೇಶಿಸಲಾಗಿದ್ದರೂ ಸಹ ಸದರಿ ಅಧಿಕಾರಿಯವರು ಸ್ಥಳ ನಿಯುಕ್ತಿಗೊಳಿಸಲಾದ ಹುದ್ದೆಯ ಕರ್ತವ್ಯಕ್ಕೆ ಹಾಜರಾಗದೇ ಇದ್ದುದರಿಂದ ಮೇಲೆ (2)ರಲ್ಲಿ ಓದಲಾದ ದಿನಾಂಕ: 29–08–2012ರ ಅಧಿಸೂಚನೆ ಸಂಖ್ಯೆ: ಸಿಆಸುಇ 113 ಸಅಸೇ 2012ರಲ್ಲಿ ವರ್ಗಾಯಿಸಿದ ಸ್ಥಳದಲ್ಲಿ ಕೂಡಲೇ ಕರ್ತವ್ಯಕ್ಕೆ ಹಾಜರಾಗುವಂತೆ ತಿಳಿಸಿ ಸಿಆಸುಇ ಇಲಾಖೆಯಿಂದ ನೇರವಾಗಿ ಬಿಡುಗಡೆಗೊಳಿಸಿದ್ದರೂ ಸಹ ಕರ್ತವ್ಯಕ್ಕೆ ಹಾಜರಾಗದಿದ್ದುದರಿಂದ ಮೇಲೆ (3)ರಲ್ಲಿ ಓದಲಾದ ಹಿಂಬರಹದಲ್ಲಿ ದಿನಾಂಕ: 17–08–2012ರ ಅಧಿಸೂಚನೆಯಲ್ಲಿ ವರ್ಗಾಯಿಸಿದ ಸ್ಥಳಕ್ಕೆ ಕರ್ತವ್ಯಕ್ಕೆ ಹಾಜರಾಗುವಂತೆ ಅಂತಿಮ ಸೂಚನೆಯನ್ನು ನೀಡಿದ್ದರೂ ಸಹ ಸ್ಥಳ ನಿಯುಕ್ತಿಗೊಳಿಸಿ ನೇಮಿಸಿದ ಹುದ್ದೆಯಲ್ಲಿ ಕರ್ತವ್ಯಕ್ಕೆ ಹಾಜರಾಗದೇ ಸರ್ಕಾರಿ ಸೇವೆಗೆ ಅನಧಿಕೃತವಾಗಿ ಗೈರು ಹಾಜರಾಗುವ ಮೂಲಕ ದುರ್ನಡತೆ ಎಸಗಿದ್ದರಿಂದ ಮೇಲೆ (4)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಶ್ರೀ ಎಸ್.ಎಸ್. ಜಯಧರ್, ನಿವೃತ್ತ ಅಧೀನ ಕಾರ್ಯದರ್ಶಿ, ಇವರ ವಿರುದ್ಧದ ಶಿಸ್ತುಕ್ರಮವನ್ನು ಬಾಕಿ ಇರಿಸಿ ಸರ್ಕಾರಿ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಲಾಗಿತ್ತು.

ಮೇಲೆ (5)ರಲ್ಲಿ ಓದಲಾದ ನೋಟೀಸ್‌ನೊಂದಿಗೆ ಅಮಾನತ್ತಿನಲ್ಲಿರಿಸಲಾಗಿದ್ದ ಶ್ರೀ ಎಸ್.ಎಸ್. ಜಯಧರ್, ನಿವೃತ್ತ ಅಧೀನ ಕಾರ್ಯದರ್ಶಿ, ಇವರು, ಸ್ಥಳ ನಿಯುಕ್ತಿಗೊಳಿಸಿ ನೇಮಿಸಿರುವ ಹುದ್ದೆಯಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳದೆ, ಸರ್ಕಾರದ ಆದೇಶಗಳನ್ನು ಪಾಲಿಸದೇ, ಬೇಜವಾಬ್ದಾರಿತನ ತೋರಿಸಿರುವುದಲ್ಲದೇ ಸಕ್ಷಮ ಪ್ರಾಧಿಕಾರದ ಅನುಮೋದನೆ ಪಡೆಯದೇ ಸರ್ಕಾರಿ ಸೇವೆಗೆ ದಿನಾಂಕ: 17–08–2012ರಿಂದ 06–04–2013ರವರೆಗೆ ಅನಧಿಕೃತ ಗೈರು ಹಾಜರಾಗುವ ಮೂಲಕ ಹಾಗೂ ಸಕ್ಷಮ ಪ್ರಾಧಿಕಾರದ ಅನುಮೋದನೆ ಪಡೆಯದೇ ಹಾಗೂ ಅಧಿಕೃತ ಸರ್ಕಾರಿ ವೈದ್ಯರಿಂದ ಪಡೆದ ವೈದ್ಯಕೀಯ ಪ್ರಮಾಣ ಪತ್ರವನ್ನು ಸಲ್ಲಿಸದೇ, ಖಾಸಗಿ ವೈದ್ಯರಿಂದ ಪಡೆದ ವೈದ್ಯಕೀಯ ಪ್ರಮಾಣ ಪತ್ರವನ್ನು ಸಲ್ಲಿಸಿ, ದಿನಾಂಕ: 06–04–2013 ರಿಂದ 09–05–2013ರವರೆಗೆ ಹಾಗೂ 10–05–2013ರಿಂದ ಅಧಿಕಾರಿಯವರನ್ನು ಸರ್ಕಾರಿ ಸೇವೆಯಿಂದ ಅಮಾನತ್ತುಗೊಳಿಸಿದ ದಿನಾಂಕ: 25–06–2013ರವೆಗೆ ಸರ್ಕಾರಿ ಸೇವೆಗೆ ಗೈರು ಹಾಜರಾಗುವ ಮೂಲಕ 1966ರ ಕರ್ನಾಟಕ ಸರ್ಕಾರಿ ನೌಕರರ (ನಡತೆ) ನಿಯಮಗಳ ನಿಯಮ 3(iii)ನ್ನು ಸ್ಪಷ್ಟವಾಗಿ ಉಲ್ಲಂಘಿಸಿರುವ ಬಗ್ಗೆ ಇವರಿಗೆ ದೋಷಾರೋಪಣಾ ಪಟ್ಟಿಯನ್ನು ಜಾರಿ ಮಾಡಿ, ಇದಕ್ಕೆ ಪ್ರತಿರಕ್ಷಣಾ ಹೇಳಿಕೆಯನ್ನು 15ದಿನಗಳೊಳಗೆ ನೀಡುವಂತೆ ಸೂಚಿಸಲಾಗಿತ್ತು.

ಅದರಂತೆ ಮೇಲೆ (6)ರಲ್ಲಿ ಓದಲಾದ ಅಧಿಕಾರಿಯವರು ಪ್ರತಿರಕ್ಷಣಾ ಹೇಳಿಕೆಯನ್ನು ನೀಡಿ, ದಿನಾಂಕ: 20–08–2012 ರಿಂದ 09–05–2013ರವರೆಗೆ ವೈಯಕ್ತಿಕ ಕಾರಣಗಳಿಂದಾಗಿ ಅನಿವಾರ್ಯವಾಗಿ ಗೈರು ಹಾಜರಾಗಿರುತ್ತೇನೆಂದು ತಿಳಿಸಿ, ತಮ್ಮ ವಿರುದ್ಧದ ಆರೋಪದಿಂದ ದೋಷ ಮುಕ್ತಗೊಳಿಸಬೇಕೆಂದು ಕೋರಿದನ್ನು ಒಪ್ಪದ ಸರ್ಕಾರವು ಈ ಬಗ್ಗೆ ಕೂಲಕಂಷವಾಗಿ ಪರಿಶೀಲಿಸಿ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ತಿಳಿಯುವ ದೃಷ್ಟಿಯಿಂದ ಅಧಿಕಾರಿಯವರ ವಿರುದ್ಧ ಕ.ನಾ.ಸೇ.(ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 11ರಡಿ ಇಲಾಖಾ ವಿಚಾರಣೆಯನ್ನು ನಡೆಸುವ ಸಲುವಾಗಿ ನಿಯಮ 11(2)ರಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮೇಲೆ (7)ರಲ್ಲಿ ಓದಲಾಗಿರುವ ಆದೇಶದಲ್ಲಿ ಶ್ರೀ ವಸಂತ್. ಹೆಚ್ ಮುಳಸಾವಳಗಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಲಾಗಿತ್ತು.

ಅದರಂತೆ, ಮೇಲೆ (8)ರಲ್ಲಿ ಓದಲಾದ ಪತ್ರದೊಂದಿಗೆ ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸಲ್ಲಿಸಿದ್ದು, ಈ ವರದಿಯಲ್ಲಿ ಆಪಾದಿತರು ರಜಾ ಅರ್ಜಿಗಳನ್ನು ಸಲ್ಲಿಸಿದ್ದಾಗ್ಯೂ ಅಧಿಕಾರಿಯವರು ಸಲ್ಲಿಸಿದ ಖಾಸಗಿ ವೈದ್ಯಕೀಯ ಪ್ರಮಾಣ ಪತ್ರವನ್ನು ವೈದ್ಯಕೀಯ ಮಂಡಳಿ ಮುಂದೆ ಹಾಜರು ಪಡಿಸದೇ ಅವುಗಳ ಮೇಲೆ ಯಾವುದೇ ಕ್ರಮ ಕೈಗೊಳ್ಳದೇ ಇರುವುದರಿಂದ ದಿನಾಂಕ: 17–08–2012 ರಿಂದ 06–04–2013ರವರೆಗೆ ಮತ್ತು 06–04–2013 ರಿಂದ 09–05–2013ರವರೆಗೆ ಆಪಾದಿತರು ಅನಧಿಕೃತವಾಗಿ ಗೈರು ಹಾಜರಾಗಿದ್ದಾರೆ ಎಂದು ರುಜುವಾತು ಪಡಿಸುವಲ್ಲಿ ಶಿಸ್ತು ಪ್ರಾಧಿಕಾರದವರು ವಿಫಲರಾಗಿದ್ದರಿಂದ ಆಪಾದನೆಯು ರುಜುವಾತಾಗಿಲ್ಲ ಎಂದು ಅಭಿಪ್ರಾಯ ಪಟ್ಟಿರುತ್ತಾರೆ.

ವಿಚಾರಣಾ ವರದಿಯನ್ನು ಕೂಲಕಂಷವಾಗಿ ಪರಿಶೀಲಿಸಿದ ಸರ್ಕಾರವು ಅಧಿಕಾರಿಯವರನ್ನು ದಿನಾಂಕ: 17–08–2012ರ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ 113 ಸಅಸೇ 2012ರಲ್ಲಿ ಕರ್ನಾಟಕ ಮಾಹಿತಿ ಆಯೋಗದ ಅಧೀನ ಕಾರ್ಯದರ್ಶಿ ಹುದ್ದೆಗೆ ಸ್ಥಳನಿಯುಕ್ತಿಗೊಳಿಸಿ ಆದೇಶಿಸಿದ್ದು, ಈ ಆದೇಶದ ಪ್ರತಿಯನ್ನು ಅಧಿಕಾರಿಯವರು ದಿನಾಂಕ: 18–08–2012ರಂದು ಪಡೆದುಕೊಂಡಿದ್ದರೂ ಸಹ ವರ್ಗಾಯಿಸಿದ ಸ್ಥಳದಲ್ಲಿ ಕರ್ತವ್ಯಕ್ಕೆ ಹಾಜರಾಗದೆ ಸುಮಾರು 8 ತಿಂಗಳ ನಂತರ ದಿನಾಂಕ: 20–08–2012 ರಿಂದ 19–03–2013ರವರೆಗೆ ಮತ್ತು ದಿನಾಂಕ: 20–03–2013 ರಿಂದ 10–05–2013ರವರೆಗೆ ವೈದ್ಯಕೀಯ ಕಾರಣಗಳ ಮೇಲೆ ರಜೆ ಮಂಜೂರು ಮಾಡುವಂತೆ ಮನವಿಗಳನ್ನು ಅಂಚೆಯ ಮೂಲಕ ಕಳುಹಿಸಿದ್ದು, ಈ ಮನವಿಗಳು ಸಿಆಸು ಇಲಾಖೆಯಲ್ಲಿ ದಿನಾಂಕ: 06–04–2013 ಮತ್ತು 16–04–2013ರಂದು ಸ್ವೀಕೃತವಾಗಿದ್ದು, ಅಧಿಕಾರಿಯವರು ರಜಾ ಮನವಿಯನ್ನು ಸಲ್ಲಿಸಿರುವ ದಿನಾಂಕವೇ 06–04–2013 ಆಗಿರುವುದರಿಂದ ಅಧಿಕಾರಿಯವರು ವರ್ಗಾಯಿಸಿದ ಸ್ಥಳದಲ್ಲಿ ಕರ್ತವ್ಯಕ್ಕೆ ಹಾಜರಾಗದೆ ದಿನಾಂಕ: 17–08–2012 ರಿಂದ 05–04–2013ರವರೆಗೆ ಸರ್ಕಾರಿ

ಸೇವೆಗೆ ಅನಧಿಕೃತವಾಗಿ ಗೈರು ಹಾಜರಾಗಿದ್ದರೆಂಬುದು ಸ್ವಯಂಸಿದ್ಧವಾಗುತ್ತದೆಂದೂ, ನಂತರವೂ ಸಹ ದಿನಾಂಕ: 10–05–2013ರಂದು ಕರ್ತವ್ಯಕ್ಕೆ ಹಾಜರಾಗುತ್ತಿರುವುದಾಗಿ ಮನವಿಯನ್ನು ಸಲ್ಲಿಸಿದ್ದರೂ ಸಹ ಅಮಾನತ್ತುಗೊಳಿಸಿದ ದಿನಾಂಕ: 25–06–2013ರವರೆಗೆ ಕರ್ತವ್ಯಕ್ಕೆ ಗೈರು ಹಾಜರಾಗಿರುವುದು ಸಹ ಸ್ವಯಂಸಿದ್ಧವಾಗುತ್ತದಾದ್ದರಿಂದ ಸುಮಾರು 8 ತಿಂಗಳುಗಳ ನಂತರ ಅಂಚೆಯ ಮೂಲಕ ಕಳುಹಿಸಿರುವ ಮನವಿಗಳ ಮೇಲೆ ಯಾವುದೇ ಕ್ರಮ ಕೈಗೊಳ್ಳದೇ ಇದ್ದುದರಿಂದ ಆಪಾದಿತರು ದಿನಾಂಕ:17–08–2012 ರಿಂದ 09–05–2013ರವರೆಗೆ ಅನಧಿಕೃತವಾಗಿ ಗೈರು ಹಾಜರಾಗಿದ್ದಾರೆ ಎಂಬುದನ್ನು ರುಜುವಾತು ಪಡಿಸುವಲ್ಲಿ ಶಿಸ್ತು ಪ್ರಾಧಿಕಾರವು ವಿಫಲವಾಗಿದೆ ಎಂದು ವಿಚಾರಣಾ ವರದಿಯಲ್ಲಿ ನೀಡಿರುವ ವಿಚಾರಣಾಧಿಕಾರಿಯವರ ನಿರ್ಣಯವನ್ನು ಒಪ್ಪಲು ಸಾಧ್ಯವಾಗುವುದಿಲ್ಲವೆಂದು ಶಿಸ್ತು ಪ್ರಾಧಿಕಾರವು ನಿರ್ಣಯಿಸಿದ್ದರಿಂದ ಮೇಲೆ (9)ರಲ್ಲಿ ಓದಲಾಗಿರುವ ಎರಡನೇ ಕಾರಣ ಕೇಳುವ ನೋಟೀಸ್‌ನೊಂದಿಗೆ ವಿಚಾರಣಾ ವರದಿಯ ಪ್ರತಿಯನ್ನು ಆಪಾದಿತ ಅಧಿಕಾರಿಯವರಿಗೆ ಕಳುಹಿಸಿ, ಅಧಿಕಾರಿಯವರು ಅನಧಿಕೃತವಾಗಿ ಗೈರು ಹಾಜರಾಗಿರುವ ದಿನಾಂಕ: 17–08–2012 ರಿಂದ 05–04–2013ರವರೆಗೆ ಹಾಗೂ 10–05–2013ರಿಂದ ಅಮಾನತ್ತುಗೊಳಿಸಿದ ಹಿಂದಿನ ದಿನಾಂಕವಾದ: 24–06–2013 ರವರೆಗೆ ಕ.ನಾ.ಸೇ.ನಿ.ಯ ನಿಯಮ 106(ಎ)ನ್ವಯ ಅಸಾಧಾರಣ ರಜೆಯನ್ನು ಏಕೆ ಮಂಜೂರು ಮಾಡಬಾರದೆಂಬ ಬಗ್ಗೆ ಹಾಗೂ ಅಮಾನತ್ತಿನ ಅವಧಿಯಾದ ದಿನಾಂಕ: 25–06–2013ರಿಂದ ದಿನಾಂಕ: 28–11–2013ರವರೆಗಿನ ಅವಧಿಯನ್ನು ಕರ್ತವ್ಯದ ಮೇಲಿಲ್ಲದ ಅವಧಿ ಎಂದು ಏಕೆ ಪರಿಗಣಿಸಬಾರದೆಂಬ ಬಗ್ಗೆ ಲಿಖಿತ ಹೇಳಿಕೆಯನ್ನು 15 ದಿನಗಳ ಒಳಗೆ ಸಲ್ಲಿಸುವಂತೆ ಸೂಚಿಸಲಾಗಿತ್ತು.

ಮೇಲೆ (10)ರಲ್ಲಿ ಓದಲಾದ ಲಿಖಿತ ಹೇಳಿಕೆಯಲ್ಲಿ ಅಧಿಕಾರಿಯವರು ನೀಡಿರುವ ಉತ್ತರವನ್ನು ಕೂಲಂಕಷವಾಗಿ ಪರಿಶೀಲಿಸಿದಾಗ ಅಧಿಕಾರಿಯವರು ವಿಚಾರಣಾ ವರದಿಯಲ್ಲಿ ಹೇಳಿರುವ ಅಂಶಗಳನ್ನು ಪುನರ್ ಉಚ್ಚರಿಸುತ್ತಾ, ತಮಗೆ ಮಾಹಿತಿ ಆಯೋಗದ ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸಿದ್ದರೂ, ಅದೇ ಸಮಯದಲ್ಲಿ ಅಲರ್ಜಿ ಮತ್ತು ಸಂಧಿವಾತ ಉಲ್ಬಣಗೊಂಡು ನಡೆದಾಡುವ ಪರಿಸ್ಥಿತಿಯಲ್ಲಿಲ್ಲದ್ದರಿಂದ ಕೆಲಸಕ್ಕೆ ಹಾಜರಾಗಲು ಸಾಧ್ಯವಾಗಲಿಲ್ಲವೇ ವಿನಃ ಉದ್ದೇಶಪೂರ್ವಕವಾಗಿ ಗೈರು ಹಾಜರಾಗಿಲ್ಲವೆಂದೂ, ತಾವು ಅನಧಿಕೃತವಾಗಿ ಗೈರು ಹಾಜರಾಗಿರುವುದು ಸ್ವಯಂ ಸಿದ್ಧವಾಗುತ್ತದೆಂಬುದು ವಿಚಾರಣಾ ವರದಿಯ 3ರಿಂದ 8ರವರೆಗಿನ ಪುಟಗಳಲ್ಲಿ ನೀಡಿರುವ ಕಾರಣಗಳಿಂದ ಸಾಬೀತಾಗಿರುವುದಿಲ್ಲವೆಂದೂ, ತಾವೊಬ್ಬ ಜವಾಬ್ದಾರಿಯುತ ಅಧಿಕಾರಿಯಾಗಿದ್ದು, ಅನಧಿಕೃತ ಗೈರು ಹಾಜರಿಯಿಂದಾಗುವ ಪರಿಣಾಮಗಳ ಬಗ್ಗೆ ತಮಗೆ ತಿಳಿದಿದ್ದು, ಕೆಲಸಕ್ಕೆ ಗೈರು ಹಾಜರಾದ ಆಪಾದನೆ ಬರಬಾರದೆಂಬ ಉದ್ದೇಶದಿಂದ ಕೂಡಲೇ ರಜಾ ಅರ್ಜಿಯನ್ನು ಕಳುಹಿಸಿರುತ್ತೇನೆಂದೂ, ತಾವು ಉದ್ದೇಶಪೂರ್ವಕವಾಗಿ ಹಾಗೂ ಇಚ್ಛಾಪೂರ್ವಕವಾಗಿ ಗೈರು ಹಾಜರಿಲ್ಲದಿರುವಾಗ ಅದು ದುರ್ನಡತೆಯೆಂದು ಎನಿಸಿಕೊಳ್ಳುವುದಿಲ್ಲವಾದ್ದರಿಂದ ವಿಚಾರಣಾ ವರದಿಯನ್ನು ಒಪ್ಪಿಕೊಂಡು ತಮ್ಮನ್ನು ದೋಷ ಮುಕ್ತಗೊಳಿಸಬೇಕೆಂದು ಕೋರಿರುತ್ತಾರೆ.

ವಿಚಾರಣಾ ವರದಿಯ 3 ರಿಂದ 8ರವರೆಗಿನ ಪುಟಗಳಲ್ಲಿ ಅಧಿಕಾರಿಯವರು ರಜಾ ಅರ್ಜಿಗಳನ್ನು ಹಾಗೂ ವೈದ್ಯಕೀಯ ಪ್ರಮಾಣ ಪತ್ರಗಳನ್ನು ಕೊಟ್ಟಿರುವುದನ್ನು, ಈ ಮನವಿಗಳು ಶಾಖೆಯಲ್ಲಿ ಸ್ವೀಕೃತವಾಗಿರುವುದನ್ನು 1ನೇ ಸಾಕ್ಷಿದಾರರು ಒಪ್ಪಿಕೊಂಡಿರುವುದನ್ನು, ಈ ರಜಾ ಅರ್ಜಿಗಳ ಮೇಲೆ ಯಾವುದೇ ಕ್ರಮಕೈಗೊಳ್ಳದಿರುವುದನ್ನು, ಹಾಜರಾತಿ ಪುಸ್ತಕವನ್ನು ಕೈಬಿಡಬೇಕೆಂದು ಸಿಆಸು ಇಲಾಖೆಯು ಸುತ್ತೋಲೆಯನ್ನು ಹೊರಡಿಸಿರುವುದನ್ನು ಪ್ರಸ್ತಾಪಿಸಿ ರಜಾ ಅರ್ಜಿಯ ಮೇಲೆ ಯಾವುದೇ ನಿರ್ಣಯವನ್ನು ತೆಗೆದುಕೊಳ್ಳದಿರುವುದರಿಂದ ಹಾಗೂ ರಜಾ ಅರ್ಜಿಯನ್ನು ತಿರಸ್ಕರಿಸದಿರುವುದರಿಂದ ಇದು ಅನಧಿಕೃತ ಗೈರುಹಾಜರಿ ಆಗುವುದಿಲ್ಲವೆಂದೂ, ಅಮಾನತ್ತಿನ ದಿನದಿಂದ ಮುಂದಿನ ಅವದಿಯನ್ನು ನಿರೀಕ್ಷಣಾ ಅವಧಿಯೆಂದು ಹೇಳಬಹುದಾಗಿದೆ ಎಂದೂ, ವೈದ್ಯಕೀಯ ಪ್ರಮಾಣ ಪತ್ರವನ್ನು ವೈದ್ಯಕೀಯ ಮಂಡಳಿಗೆ ಕಳುಹಿಸಿ, ಪರಿಶೀಲಿಸಿರುವುದಿಲ್ಲವಾದ್ದರಿಂದ ಇದು ಅನಧಿಕೃತ ಗೈರುಹಾಜರಿ ಆಗುವುದಿಲ್ಲವೆಂದು ಹೇಳಲಾಗಿದೆ.

ಅಧಿಕಾರಿಯವರು ಎರಡನೇ ಕಾರಣ ಕೇಳುವ ನೋಟೀಸಿಗೆ ನೀಡಿರುವ ತಮ್ಮ ಲಿಖಿತ ಹೇಳಿಕೆಯಲ್ಲಿ ಹಾಗೂ ವಿಚಾರಣಾ ವರದಿಯಲ್ಲಿ ಹೇಳಿದ ಯಾವುದೇ ಕಾರಣಗಳಿಂದಲೂ ಅಧಿಕಾರಿಯವರು ದಿನಾಂಕ: 17–08–2012ರಿಂದ 05–04–2013ರವರೆಗೆ ಅನಧಿಕೃತವಾಗಿ ಗೈರು ಹಾಜರಾಗಿದ್ದರು ಎಂಬುದನ್ನು ಹಾಗೂ ದಿನಾಂಕ:10–05–2013ರಂದು ಕರ್ತವ್ಯಕ್ಕೆ ಹಾಜರಾಗುತ್ತಿರುವುದಾಗಿ ಮನವಿ ಸಲ್ಲಿಸಿದ್ದರೂ ನಂತರ ದಿನಾಂಕ: 11–05–2013ರಿಂದ ಅಧಿಕಾರಿಯವರನ್ನು ಅಮಾನತ್ತುಗೊಳಿಸಿದ್ದ ದಿನಾಂಕ: 25–06–2013ರವರೆಗೆ ಅನಧಿಕೃತ ಗೈರು ಹಾಜರಾಗಿದ್ದರು ಎಂಬುದನ್ನು ಅಲ್ಲಗೆಳೆಯಲು ಸಾಧ್ಯವಾಗುವುದಿಲ್ಲ. ವಿಚಾರಣೆಯಲ್ಲಿ ರಜಾ ಅರ್ಜಿಗಳು ದಿನಾಂಕ: 06–04–2013ರಂದು ಸ್ವೀಕೃತವಾಗಿದೆ ಎಂದೇ ಹೇಳಲಾಗಿರುವುದರಿಂದ ಇದಕ್ಕಿಂತ ಮೊದಲಿನ ಅವಧಿಯ ಗೈರು ಹಾಜರಿಯು ಅನಧಿಕೃತವೇ ಆಗುತ್ತದೆ. ಆದ್ದರಿಂದ ಸ್ಥಳ ನಿಯುಕ್ತಿಗೊಳಿಸಿದ ಹುದ್ದೆಯಲ್ಲಿ ಕರ್ತವ್ಯಕ್ಕೆ ಹಾಜರಾಗದೇ ಈ ಬಗ್ಗೆ ವಿಚಾರಣೆಯನ್ನು ಆರಂಭಿಸಿದ ನಂತರ ಸುಮಾರು ಏಳೂವರೆ ತಿಂಗಳ ನಂತರ ಅಂಚೆಯ ಮೂಲಕ ತಲುಪಿಸಿದ ರಜಾ ಅರ್ಜಿಗಳ ಮೇಲೆ ಯಾವುದೇ ನಿರ್ಣಯ ಕೈಗೊಂಡಿಲ್ಲದಿರುವುದರಿಂದ ಇದು ಅನಧಿಕೃತ ಗೈರುಹಾಜರಿ ಆಗುವುದಿಲ್ಲ ಎಂದು ವಿಚಾರಣಾ ವರದಿಯಲ್ಲಿ ಹೇಳಿರುವುದನ್ನು ಒಪ್ಪಲು ಸಾಧ್ಯವಾಗುವುದಿಲ್ಲ. ಇದೇ ರೀತಿ ಹಾಜರಾತಿ ಪುಸ್ತಕವನ್ನು ಕೈಬಿಡಬೇಕೆಂದು ಸಿಆಸು ಇಲಾಖೆಯು ಸುತ್ತೋಲೆಯನ್ನು ಹೊರಡಿಸಿರುವುದರಿಂದ ನೇಮಕಾತಿ ನಿರೀಕ್ಷಣೆಯಲ್ಲಿದ್ದ ಅಧಿಕಾರಿಗಳು ಹಾಜರಾತಿ ಪುಸ್ತಕದಲ್ಲಿ ಸಹಿ ಮಾಡದೇ ಗೈರು ಹಾಜರಾಗಬೇಕೆಂದು ಹೇಳಿದಂತಾಗುವುದಿಲ್ಲ.

ಅಧಿಕಾರಿಯವರೇ ತಿಳಿಸಿರುವಂತೆ, ಜವಾಬ್ದಾರಿಯುತ ಅಧಿಕಾರಿ ಸ್ಥಾನದಲ್ಲಿದ್ದವರು ನೇಮಕಾತಿ ನಿರೀಕ್ಷಣೆಯಲ್ಲಿರುವಾಗ, ಸ್ಥಳ ನಿಯುಕ್ತಿಗೊಳಿಸಿದ ಆದೇಶವನ್ನು ಸ್ವೀಕರಿಸಿದ ಕೂಡಲೇ, ಆ ದಿನವೇ ಸ್ಥಳನಿಯುಕ್ತಿಗೊಳಿಸಿದ ಸ್ಥಾನದಲ್ಲಿ ಕರ್ತವ್ಯಕ್ಕೆ ಹಾಜರಾಗಬೇಕಾಗಿತ್ತು, ಆದರೆ, ಆ ರೀತಿ ಮಾಡದೇ, ಕೂಡಲೇ ರಜಾ ಮನವಿಯನ್ನೂ ಸಹ ಸಲ್ಲಿಸದೇ ಸುಮಾರು ಏಳೂವರೆ ತಿಂಗಳುಗಳವರೆಗೆ ಅನಧಿಕೃತವಾಗಿ ಗೈರು ಹಾಜರಾಗಿ ನಂತರ ಕೇಂದ್ರ ಸ್ಥಾನದಿಂದಲ್ಲದೇ ಜಮಖಂಡಿಯಿಂದ ರಜಾ ಮನವಿಯನ್ನು ಅಂಚೆಯ ಮೂಲಕ ಕಳುಹಿಸಿರುವುದೂ ಸಹ ಅಧಿಕಾರಿಯವರು ಎಸಗಿರುವ ಕರ್ತವ್ಯ ಲೋಪವೇ ಆಗಿರುತ್ತದೆ.

ಮೇಲೆ ವಿವರಸಿರುವಂತೆ ಅಧಿಕಾರಿಯವರು 2ನೇ ಕಾರಣ ಕೇಳುವ ನೋಟೀಸಿಗೆ ನೀಡಿರುವ ಉತ್ತರದಲ್ಲಿ ಅಧಿಕಾರಿಯವರು ಈ ಮೊದಲು ಹೇಳದಿರುವ ಹಾಗೂ ವಿಚಾರಣಾ ವರದಿಯಲ್ಲಿ ಇಲ್ಲದಿರುವ ಯಾವುದೇ ಹೊಸ ಅಂಶಗಳನ್ನು ಹೇಳಿಲ್ಲವಾದ್ದರಿಂದ ಆಪಾದಿತರು ರಜಾ ಮನವಿಯನ್ನು ಸಲ್ಲಿಸಿರುವುದೇ ದಿನಾಂಕ: 06–04–2013 ಆಗಿದ್ದು, ಈ ಮನವಿಗಳ ಮೇಲೆ ಯಾವುದೇ ಕ್ರಮ ಕೈಗೊಳ್ಳದೇ ಇದ್ದುದರಿಂದ ಆಪಾದಿತರು ದಿನಾಂಕ: 17–08–2012ರಿಂದ 09–05–2013ರವರೆಗೆ ಅನಧಿಕೃತವಾಗಿ ಗೈರು ಹಾಜರಾಗಿದ್ದಾರೆ ಎಂಬುದನ್ನು ರುಜುವಾತು ಪಡಿಸುವಲ್ಲಿ ಶಿಸ್ತು ಪ್ರಾಧಿಕಾರವು ವಿಫಲವಾಗಿದೆ ಎಂದು ವಿಚಾರಣಾಧಿಕಾರಿಗಳು ನೀಡಿರುವ ವರದಿಯನ್ನು ಅಂಗೀಕರಿಸದಿರಲು ತೀರ್ಮಾನಿಸಿದ ಸರ್ಕಾರವು ಅಧಿಕಾರಿಯವರು ಅನಧಿಕೃತವಾಗಿ ಗೈರು ಹಾಜರಾದ ಅವಧಿ, ರಜಾ ಮನವಿ ಸ್ವೀಕೃತವಾದ ನಂತರದ ಅವಧಿ, ಅಮಾನತ್ತಿನ ಅವಧಿ ಹಾಗೂ ಇತರ ಅವಧಿಗಳನ್ನು ಕ್ರಮಬದ್ಧಗೊಳಿಸಲು ತೀರ್ಮಾನಿಸಿದ ಸರ್ಕಾರವು ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 03 ಸೇಇವಿ 2013, ಬೆಂಗಳೂರು, ದಿನಾಂಕ: 30ನೇ ಅಕ್ಟೋಬರ್ 2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಶ್ರೀ ಜಯಧರ್, ನಿವೃತ್ತ ಸರ್ಕಾರದ ಅಧೀನ ಕಾರ್ಯದರ್ಶಿ, ಇವರು ಈ ಹಿಂದೆ ಅನಧಿಕೃತವಾಗಿ ಗೈರು ಹಾಜರಾಗಿದ್ದ ಹಾಗೂ ಅಮಾನತ್ತುಗೊಂಡಿದ್ದ ಅವಧಿಗೆ ಕೆಳಕಂಡಂತೆ ಕ್ರಮಬದ್ಧಗೊಳಿಸಲಾಗಿದೆ.

| | | | |
|---|---|---|---|
| 1. | ದಿನಾಂಕ: 17–08–2012ರಿಂದ 05–04–2013ರವರೆಗೆ– | 232 ದಿನಗಳು | ಅಸಾಧಾರಣ ರಜೆ (ಕ.ನಾ.ಸೇ.ನಿ. 106(ಎ)ಅನ್ವಯ) |
| 2. | ದಿನಾಂಕ: 06–04–2013 ರಿಂದ 10–05–2013 | 35 ದಿನಗಳು | ಗಳಿಕೆ ರಜೆ |
| 3. | ದಿನಾಂಕ: 11–05–2013ರಿಂದ 24–06–2013ರವರೆಗೆ | 44 ದಿನಗಳು | ಅಸಾಧಾರಣ ರಜೆ (ಕ.ನಾ.ಸೇ.ನಿ. 106(ಎ)ಅನ್ವಯ) |
| 4. | ದಿನಾಂಕ: 25–06–2013 ರಿಂದ 28–11–2013ರವರೆಗೆ | 157 ದಿನಗಳು | ಕರ್ತವ್ಯದ ಮೇಲಿಲ್ಲದ ಅವಧಿ |
| 5. | ದಿನಾಂಕ: 29–11–2013 ರಿಂದ 12–12–2013 | 14 ದಿನಗಳು | ಗಳಿಕೆ ರಜೆ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಚಂದ್ರಶೇಖರ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ

**PR. 690** (ಸೇವೆಗಳು–6).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಶ್ರೀ ಮೆಹಬೂಬ್ ಖಾನ್, ನಿವೃತ್ತ ಅಧೀನ ಕಾರ್ಯದರ್ಶಿ, ಇವರು ಈ ಹಿಂದೆ ಅಧೀನ ಕಾರ್ಯದರ್ಶಿ ವೈದ್ಯಕೀಯ ಶಿಕ್ಷಣ ಇಲಾಖೆ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಎಸಗಿದ್ದಾರೆನ್ನಲಾಗಿರುವ ದುರ್ನಡತೆ ಆರೋಪಕ್ಕೆ ಸಂಬಂಧಿಸಿದಂತೆ ಇಲಾಖಾ ವಿಚಾರಣೆಯನ್ನು ನಡೆಸಲು ಕ.ನಾ.ಸೇ ನಿಯಮಾವಳಿಗಳು 1958ರ ನಿಯಮ 214(2)(ಬಿ)(1) ರಡಿ ಅನುಮತಿ ನೀಡುವ ಹಾಗೂ ಕ.ನಾ.ಸೇ(ಸಿಸಿಎ)ನಿಯಮಾವಳಿಗಳು 1957ರ ನಿಯಮ 14(ಎ) ರಡಿಯಲ್ಲಿ ಇಲಾಖಾ ವಿಚಾರಣೆಯನ್ನು ನಡೆಸಲು ಪ್ರಕರಣವನ್ನು ಗೌ॥ ಉಪ ಲೋಕಾಯುಕ್ತರಿಗೆ ವಹಿಸುವ ಬಗ್ಗೆ.

**ಓದಲಾಗಿದೆ :**
1 ಸಹಾಯಕ ನಿಬಂಧಕರು, ವಿಚಾರಣೆಗಳು 10, ಕರ್ನಾಟಕ ಲೋಕಾಯುಕ್ತ ಬೆಂಗಳೂರು, ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ COMPT/UPLOK/BCD/707/2014/ARE–10 ದಿನಾಂಕ:6–8–2015
2 ಸರ್ಕಾರದ ಪ್ರಧಾನ ಕಾರ್ಯದರ್ಶಿ ಆರೋಗ್ಯ & ಕುಟುಂಬ ಕಲ್ಯಾಣ ಇಲಾಖೆ ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ ಹೆಚ್.ಎಫ್.ಡಬ್ಲ್ಯೂ 296 ಪಿಆರ್ಎಸ್ 2015, 13–08–2015

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ 2 ರ ದಿನಾಂಕ 13–08–2015ರ ಪತ್ರದೊಂದಿಗೆ, ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಇವರು ಸಹಾಯಕ ನಿಬಂಧಕರು, ವಿಚಾರಣೆ 10, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ದಿನಾಂಕ: 06–08–2015ರ ಪತ್ರ ಮತ್ತು ಗೌರವಾನ್ವಿತ ಉಪ ಲೋಕಾಯುಕ್ತರು, ಶ್ರೀ ಮೆಹಬೂಬ್ ಖಾನ್ ನಿವೃತ್ತ ಅಧೀನ ಕಾರ್ಯದರ್ಶಿ ಇವರು ಈ ಹಿಂದೆ ಅಧೀನ ಕಾರ್ಯದರ್ಶಿ ವೈದ್ಯಕೀಯ ಶಿಕ್ಷಣ ಇಲಾಖೆ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಎಸಗಿದ್ದಾರೆನ್ನಲಾಗಿರುವ ದುರ್ನಡತೆ ಆರೋಪಕ್ಕೆ ಸಂಬಂಧಿಸಿದಂತೆ ಕರ್ನಾಟಕ ಲೋಕಾಯುಕ್ತ ಅಧಿನಿಯಮ 1984ರ ಸೆಕ್ಷನ್ 12(3)ರಡಿ ಸಲ್ಲಿಸಿರುವ ತನಿಖಾ ವರದಿಯನ್ನು ಲಗತ್ತಿಸಿ ಕಳುಹಿಸಿದ್ದು, ಅಧೀನ ಕಾರ್ಯದರ್ಶಿ ವೃಂದದ ಅಧಿಕಾರಿಗಳ ಸೇವಾ ವಿಷಯಗಳನ್ನು ಸಿಆಸು ಇಲಾಖೆಯಲ್ಲಿ ವ್ಯವಹರಿಸುವುದರಿಂದ ಸದರಿ ಪತ್ರದಲ್ಲಿ ನಿಗದಿ ಪಡಿಸಿರುವ ಕಾಲಮಿತಿಯೊಳಗೆ ಈ ಬಗ್ಗೆ ಮುಂದಿನ ಕ್ರಮ ವಹಿಸುವಂತೆ ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ 1ರ ದಿನಾಂಕ 6–8–2015ರ ಪತ್ರದೊಂದಿಗೆ ಸಹಾಯಕ ನಿಬಂಧಕರು, ವಿಚಾರಣೆ 10, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಶ್ರೀ ಮೆಹಬೂಬ್ ಖಾನ್, ನಿವೃತ್ತ ಅಧೀನ ಕಾರ್ಯದರ್ಶಿ, ಇವರ ವಿರುದ್ಧ ಗೌರವಾನ್ವಿತ ಉಪ ಲೋಕಾಯುಕ್ತರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ಕರ್ನಾಟಕ ಲೋಕಾಯುಕ್ತ ಅಧಿನಿಯಮ 1984ರ ಸೆಕ್ಷನ್ 12(3)ರಡಿ ತನಿಖೆ ನಡೆಸಿ ಸಲ್ಲಿಸಿರುವ ತನಿಖಾ ವರದಿಯನ್ನು ಲಗತ್ತಿಸಿ ಕಳುಹಿಸಿದ್ದು, ಸದರಿ ವರದಿಯಲ್ಲಿ ಗೌರವಾನ್ವಿತ ಉಪ ಲೋಕಾಯುಕ್ತರು ಮಾಡಿರುವ ಶಿಫಾರಸ್ಸಿನನ್ವಯ ಸದರಿ ವರದಿಯ ಬಗ್ಗೆ ಕೈಗೊಂಡ ಅಥವಾ ಕೈಗೊಳ್ಳಲು ಉದ್ದೇಶಿಸಿರುವ ಕ್ರಮದ ಬಗ್ಗೆ ದಿನಾಂಕ 31–08–2015ರ ಒಳಗೆ ಕರ್ನಾಟಕ ಲೋಕಾಯುಕ್ತ ಸಂಸ್ಥೆಗೆ ವರದಿ ಮಾಡಬೇಕೆಂದು ಆರೋಗ್ಯ & ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ)ಯನ್ನು ಕೋರಿರುತ್ತಾರೆ.

ತನಿಖಾ ವರದಿಯಲ್ಲಿ ಗೌರವಾನ್ವಿತ ಉಪ ಲೋಕಾಯುಕ್ತರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ಶ್ರೀ ಮೆಹಬೂಬ್ ಖಾನ್, ನಿವೃತ್ತ ಅಧೀನ ಕಾರ್ಯದರ್ಶಿ ಇವರು ಈ ಹಿಂದೆ ಸರ್ಕಾರದ ಅಧೀನ ಕಾರ್ಯದರ್ಶಿ, ವೈದ್ಯಕೀಯ ಶಿಕ್ಷಣ ಇಲಾಖೆ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಡಾ.ಬಸವರಾಜ ಸಜ್ಜನ, ಹಿಂದಿನ ಹಿರಿಯ ತಜ್ಞರು, ಕಿಮ್ಸ್, ಹುಬ್ಬಳ್ಳಿ ಇವರ ವಿರುದ್ಧ ದಿನಾಂಕ: 08–05–2013ರಂದು ಕರ್ನಾಟಕ ಲೋಕಾಯುಕ್ತ ಸಂಸ್ಥೆಯು ಕರ್ನಾಟಕ ಲೋಕಾಯುಕ್ತ ಅಧಿನಿಯಮ 1984ರ ಸೆಕ್ಷನ್ 12(3) ರಡಿ ತನಿಖಾ ವರದಿಯನ್ನು ಸಲ್ಲಿಸಿ, ಈ ಬಗ್ಗೆ ಜರೂರಾಗಿ ಕ್ರಮವಹಿಸುವಂತೆ ತಿಳಿಸಲಾಗಿದ್ದು, ನಂತರ ಇದೇ ವಿಷಯದ ಬಗ್ಗೆ ದಿನಾಂಕ: 09–05–2013 ರಿಂದ 15–06–2013ರ ವರೆಗೆ ನೆನಪೋಲೆಗಳನ್ನು ಕಳುಹಿಸಿ, ಈ ಬಗ್ಗೆ ದಿನಾಂಕ: 24–06–2013ರೊಳಗೆ ಆದೇಶವನ್ನು ಹೊರಡಿಸುವಂತೆ ತಿಳಿಸಲಾಗಿದ್ದರೂ ಸಹ ಅಪಾದಿತ ಅಧಿಕಾರಿಯವರಾದ ಶ್ರೀ ಬಸವರಾಜ ಸಜ್ಜನ ಇವರು ದಿನಾಂಕ: 31–08–2013ರಂದು ಸರ್ಕಾರಿ ಸೇವೆಯಿಂದ ವಯೋ ನಿವೃತ್ತಿ ಹೊಂದಿದ ನಂತರ ದಿನಾಂಕ: 19–12–2013ರಂದು ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಕ.ನಾ.ಸೇ.(ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 14(ಎ)ಅಡಿಯಲ್ಲಿ ಉಪ ಲೋಕಾಯುಕ್ತರಿಗೆ ವಹಿಸಿ ಸರ್ಕಾರಿ ಆದೇಶ ಹೊರಡಿಸಲಾಗಿದ್ದು, ಈ ವಿಳಂಬದ ಬಗ್ಗೆ ಕರ್ನಾಟಕ ಲೋಕಾಯುಕ್ತ ಸಂಸ್ಥೆಯು ವೈದ್ಯಕೀಯ ಶಿಕ್ಷಣ

ಇಲಾಖೆಯ ವಿವರಣೆಯನ್ನು ಕೋರಿದ್ದು, ಈ ಬಗ್ಗೆ ಸರ್ಕಾರದ ಕಾರ್ಯದರ್ಶಿಯವರು ವೈದ್ಯಕೀಯ ಶಿಕ್ಷಣ ಇಲಾಖೆ, ಇವರು ದಿನಾಂಕ: 27–02–2014ರ ಪತ್ರದಲ್ಲಿ ನೀಡಿರುವ ವಿವರಣೆಯನ್ವಯ ವೈದ್ಯಕೀಯ ಶಿಕ್ಷಣ ಇಲಾಖೆಯಲ್ಲಿ ಕರ್ತವ್ಯನಿರ್ವಹಿಸುತ್ತಿದ್ದ ಶ್ರೀಮತಿ ಲತಾಕುಮಾರಿ, ಉಪಕಾರ್ಯದರ್ಶಿ, ಶ್ರೀ ಮೆಹಬೂಬ್ ಖಾನ್, ಅಧೀನ ಕಾರ್ಯದರ್ಶಿ, ಶ್ರೀ ಕೆ. ನಾಗರಾಜು, ಶಾಖಾಧಿಕಾರಿ ಇವರುಗಳಿಂದ ಕರ್ನಾಟಕ ಲೋಕಾಯುಕ್ತ ಸಂಸ್ಥೆಯು ಹೇಳಿಕೆಗಳನ್ನು ಪಡೆದಿದ್ದು, ಸದರಿ ಹೇಳಿಕೆಗಳನ್ವಯ ಶ್ರೀ ಕೆ. ನಾಗರಾಜ ಹಾಗೂ ಶ್ರೀಮತಿ ಲತಾ ಕುಮಾರಿ ಇವರ ವಿರುದ್ಧದ ತನಿಖೆಯನ್ನು ಮುಂದುವರಿಸಲು ಯಾವುದೇ ಅಂಶಗಳಿಲ್ಲವೆಂಬ ಕಾರಣಕ್ಕೆ ಅವರ ವಿರುದ್ಧ ತನಿಖೆಯನ್ನು ಮುಂದುವರಿಸಿರುವುದಿಲ್ಲ ಎಂದು ಗೌರವಾನ್ವಿತ ಉಪ ಲೋಕಾಯುಕ್ತರ ತನಿಖಾ ವರದಿಯಲ್ಲಿ ತಿಳಿಸಲಾಗಿರುತ್ತದೆ.

ಮುಂದುವರಿದು ಶ್ರೀ ಮೆಹಬೂಬ್ ಖಾನ್, ಇವರು ನೀಡಿರುವ ಹೇಳಿಕೆಯನ್ನು ಒಪ್ಪದೇ ಲಭ್ಯವಿರುವ ದಾಖಲೆಗಳು ಶ್ರೀ ಮೆಹಬೂಬ್ ಖಾನ್, ಇವರು ನಿಷ್ಠೆಯಿಂದ ಕರ್ತವ್ಯ ನಿರ್ವಹಿಸಿಲ್ಲವೆಂಬುದನ್ನು ಸಮರ್ಥಿಸುತ್ತಿದ್ದು ಇವರು ಕ.ನಾ.ಸೇ. (ನಡತೆ) ನಿಯಮಗಳು 1966ರ ನಿಯಮ 3(1)ನ್ನು ಪದೇಪದೇ ಉಲ್ಲಂಘಿಸಿರುವುದರಿಂದ ಇವರ ವಿರುದ್ಧ ಕ.ನಾ.ಸೇ. ನಿಯಮಾವಳಿಗಳು ನಿಯಮ 214 (2)(ಬಿ)(1) ರನ್ವಯ ಶಿಸ್ತುಕ್ರಮವನ್ನು ಹೂಡಲು ಅನುಮತಿ ನೀಡುವಂತೆ ಹಾಗೂ ಕ.ನಾ.ಸೇ.(ಸಿ.ಸಿ.ಎ) 1957ರ ನಿಯಮ 14(ಎ)ರಡಿಯಲ್ಲಿ ವಿಚಾರಣೆಯನ್ನು ಕೈಗೊಳ್ಳಲು ಕರ್ನಾಟಕ ಲೋಕಾಯುಕ್ತ ಸಂಸ್ಥೆಗೆ ವಹಿಸುವಂತೆ ಗೌರವಾನ್ವಿತ ಉಪ ಲೋಕಾಯುಕ್ತರು ಶಿಫಾರಸ್ಸು ಮಾಡಿರುತ್ತಾರೆ.

ಸರ್ಕಾರವು ಗೌರವಾನ್ವಿತ ಉಪ ಲೋಕಾಯುಕ್ತರು, ಕರ್ನಾಟಕ ಲೋಕಾಯುಕ್ತ ಅಧಿನಿಯಮ 1984ರ ಸೆಕ್ಷನ್ 12(3)ರಡಿ ಸಲ್ಲಿಸಿರುವ ತನಿಖಾ ವರದಿ ಮತ್ತು ಸದರಿ ತನಿಖಾ ವರದಿಯೊಡನೆ ಕಳುಹಿಸಿರುವ ದಾಖಲೆಗಳನ್ನು ಕೂಲಂಕಷವಾಗಿ ಪರಿಶೀಲಿಸಿದ್ದು, ಡಾ.ಬಸವರಾಜ ಸಜ್ಜನ, ಹಿಂದಿನ ಹಿರಿಯ ತಜ್ಞರು, ಕಿಮ್ಸ್, ಹುಬ್ಬಳ್ಳಿ ಇವರ ವಿರುದ್ಧ ದಿನಾಂಕ: 08–05–2013ರಂದು ಕರ್ನಾಟಕ ಲೋಕಾಯುಕ್ತ ಸಂಸ್ಥೆಯು ಕರ್ನಾಟಕ ಲೋಕಾಯುಕ್ತ ಅಧಿನಿಯಮ 1984ರ ಸೆಕ್ಷನ್ 12(3) ರಡಿ ತನಿಖಾ ವರದಿಯನ್ನು ವೈದ್ಯಕೀಯ ಶಿಕ್ಷಣ ಇಲಾಖೆಗೆ ಸಲ್ಲಿಸಿ, ಈ ಬಗ್ಗೆ ಜರೂರಾಗಿ ಕ್ರಮವಹಿಸುವಂತೆ ತಿಳಿಸಿ, ನಂತರ ಇದೇ ವಿಷಯದ ಬಗ್ಗೆ ದಿನಾಂಕ: 09–05–2013 ರಿಂದ 15–06–2013ರ ವರೆಗೆ ನೆನಪೋಲೆಯನ್ನು ಕಳುಹಿಸಿ, ಈ ಬಗ್ಗೆ ದಿನಾಂಕ: 24–06–2013ರೊಳಗೆ ಆದೇಶವನ್ನು ಹೊರಡಿಸುವಂತೆ ತಿಳಿಸಲಾಗಿದ್ದರೂ ಸಹ ಹಾಗೂ ಅನಂತರ ನಿರ್ದೇಶಕರು ಕರ್ನಾಟಕ ವೈದ್ಯಕೀಯ ವಿಜ್ಞಾನ ಸಂಸ್ಥೆ, ಹುಬ್ಬಳ್ಳಿ ಇವರು ದಿನಾಂಕ: 17–08–2013ರ ಪತ್ರದಲ್ಲಿ ಡಾ॥ ಬಸವರಾಜ ಸಜ್ಜನ, ವೈದ್ಯಾಧಿಕಾರಿಗಳು, ಇವರನ್ನು ಹೆಚ್.ಐ.ವಿ ಏಡ್ಸ್ ಎ.ಆರ್.ಟಿ. ಕೇಂದ್ರ, ಕಿಮ್ಸ್ ಆಸ್ಪತ್ರೆ ಹುಬ್ಬಳ್ಳಿಯಿಂದ ಮಾತೃ ಇಲಾಖೆಗೆ ದಿನಾಂಕ: 27–06–2009ರಂದು ಬಿಡುಗಡೆಗೊಳಿಸಿದೆ ಎಂದು ತಿಳಿಸಿದ್ದರೂ ಸಹ, ಶ್ರೀ ಮೆಹಬೂಬ್ ಖಾನ್ ಇವರು ದಿನಾಂಕ 17–08–2013 ರಿಂದ ದಿನಾಂಕ: 27–11–2013ರವರೆಗೆ ಈ ಬಗ್ಗೆ ಯಾವುದೇ ಕ್ರಮವನ್ನು ವಹಿಸದೆ ಇದ್ದುದರಿಂದ ಶ್ರೀ ಬಸವರಾಜ ಸಜ್ಜನ ಇವರು ದಿನಾಂಕ: 31–08–2013ರಂದು ಸರ್ಕಾರಿ ಸೇವೆಯಿಂದ ವಯೋ ನಿವೃತ್ತಿ ಹೊಂದಿದ ನಂತರ ದಿನಾಂಕ: 19–12–2013ರಂದು ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಕ.ನಾ.ಸೇ.(ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 14(ಎ)ಅಡಿಯಲ್ಲಿ ಉಪ ಲೋಕಾಯುಕ್ತರಿಗೆ ವಹಿಸಿ ಸರ್ಕಾರಿ ಆದೇಶ ಹೊರಡಿಸಲಾಗಿದೆ. ಈ ರೀತಿ ಉದ್ದೇಶಪೂರ್ವಕವಾಗಿ ವಿಳಂಬ ಮಾಡುವ ಮೂಲಕ ಆಪಾದಿತರಾದ ಶ್ರೀ ಮೆಹಬೂಬ್ ಖಾನ್ ನಿವೃತ್ತ ಅಧೀನ ಕಾರ್ಯದರ್ಶಿ ಇವರು ಕ.ನಾ.ಸೇ. (ನಡತೆ) ನಿಯಮಗಳು 1966ರ ನಿಯಮ 3(1)ನ್ನು ಉಲ್ಲಂಘಿಸಿರುವುದು ಮೇಲ್ನೋಟಕ್ಕೆ ಕಂಡುಬರುವುದರಿಂದ ಗೌರವಾನ್ವಿತ ಉಪಲೋಕಾಯುಕ್ತರು 12(3)ರಡಿ ಸಲ್ಲಿಸಿರುವ ವರದಿಯನ್ನು ಒಪ್ಪಿಕೊಂಡು ಶ್ರೀ ಮೆಹಬೂಬ್ ಖಾನ್, ನಿವೃತ್ತ ಅಧೀನ ಕಾರ್ಯದರ್ಶಿ, ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ನಡೆಸಲು ಕ.ನಾ.ಸೇ ನಿಯಮಾವಳಿಗಳು 1958ರ ನಿಯಮ 214(2)(ಬಿ)(1) ರಡಿ ಅನುಮತಿ ನೀಡುವ ಬಗ್ಗೆ ಹಾಗೂ ಕ.ನಾ.ಸೇ(ಸಿಸಿಎ)ನಿಯಮಾವಳಿಗಳು 1957ರ ನಿಯಮ 14(ಎ) ರಡಿಯಲ್ಲಿ ಇಲಾಖಾ ವಿಚಾರಣೆಯನ್ನು ನಡೆಸಲು ಗೌರವಾನ್ವಿತ ಉಪ ಲೋಕಾಯುಕ್ತರು, ಕರ್ನಾಟಕ ಲೋಕಾಯುಕ್ತ ಬೆಂಗಳೂರು ಇವರಿಗೆ ವಹಿಸಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 16 ಸೇಇವಿ 2015, ಬೆಂಗಳೂರು, ದಿನಾಂಕ: 06ನೇ ಅಕ್ಟೋಬರ್ 2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಮೆಹಬೂಬ್ ಖಾನ್, ನಿವೃತ್ತ ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರ ಸಚಿವಾಲಯ ಇವರು ಈ ಹಿಂದೆ ಅಧೀನ ಕಾರ್ಯದರ್ಶಿ, ವೈದ್ಯಕೀಯ ಶಿಕ್ಷಣ ಇಲಾಖೆ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಎಸಗಿದ್ದಾರೆನ್ನಲಾಗಿರುವ ದುರ್ನಡತೆ ಆರೋಪಗಳಿಗೆ ಸಂಬಂಧಿಸಿದಂತೆ ಇಲಾಖಾ ವಿಚಾರಣೆಯನ್ನು ನಡೆಸಲು ಕ.ನಾ.ಸೇ ನಿಯಮಾವಳಿಗಳು 1958ರ ನಿಯಮ 214(2)(ಬಿ)(1) ರಡಿ ಸರ್ಕಾರದ ಅನುಮತಿಯನ್ನು ನೀಡಿ, ಈ ಪ್ರಕರಣದ ವಿಚಾರಣೆಯನ್ನು ನಡೆಸಲು ಕ.ನಾ.ಸೇ(ಸಿಸಿಎ)ನಿಯಮಾವಳಿಗಳು 1957ರ ನಿಯಮ 14(ಎ) ರಡಿಯಲ್ಲಿ ಗೌರವಾನ್ವಿತ ಉಪ ಲೋಕಾಯುಕ್ತರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರಿಗೆ ವಹಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಚಂದ್ರಶೇಖರ**

ಸರ್ಕಾರದ ಅಧೀನ ಕಾರ್ಯದರ್ಶಿ

**PR. 25** ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ(ಸೇವೆಗಳು–6).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಶ್ರೀಮತಿ ಅಪರ್ಣಾ ಪಾವಟೆ, ಸರ್ಕಾರದ ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರ ಸಚಿವಾಲಯ ನಿಯೋಜನೆ ಮೇಲೆ ತಹಶೀಲ್ದಾರ್, ವಿಜಯಪುರ, ಇವರ ವಿರುದ್ಧದ ಲೋಕಾಯುಕ್ತ ಟ್ರ್ಯಾಪ್ ಪ್ರಕರಣಕ್ಕೆ ಸಂಬಂಧಿಸಿದಂತೆ ಇವರ ವಿರುದ್ಧ ಶಿಸ್ತು ಕ್ರಮವನ್ನು ಬಾಕಿಯಿರಿಸಿ, ಅಮಾನತ್ತನ್ನು ತೆರವುಗೊಳಿಸಿ, ಸೇವೆಗೆ ಪುನರ್ ಸ್ಥಾಪಿಸುವ ಬಗ್ಗೆ.

**ಓದಲಾಗಿದೆ :**

1) ಅಪರ ಪೋಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ ಲೋಕ್/ಐಎನ್‌ವಿ(ಜಿ)/ಎಲ್–02/ ಸಿಆರ್–02/2015/ವಿಜಯಪುರ, ದಿನಾಂಕ 7–2–2015.
2) ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 2 ಸೇಇವಿ 2015, ದಿನಾಂಕ 20–3–2015.
3) ಅಪರ ಪೋಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ ಲೋಕ್/ಐಎನ್‌ವಿ(ಜಿ)/ಎಲ್–02/ಸಿಆರ್–02/2015/ವಿಜಯಪುರ, ದಿನಾಂಕ 8–6–2015.
4) ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 2 ಸೇಇವಿ 2015, ದಿನಾಂಕ 2–7–2015.
5) ಸರ್ಕಾರದ ಪತ್ರ ಸಂಖ್ಯೆ ಸಿಆಸುಇ 221 ಸಆಸೇ 2015, ದಿನಾಂಕ 3–7–2015.

6) ಸರ್ಕಾರದ ಪತ್ರ ಸಂಖ್ಯೆ ಸಿಆಸುಇ 2 ಸೇಇವಿ 2015, ದಿನಾಂಕ 25–7–2015.

7) ಮಾನ್ಯ ಕೆ.ಎ.ಟಿ.ಯ ದಿನಾಂಕ 30–7–2015ರ ತೀರ್ಪು.

8) ಸರ್ಕಾರಿ ವಕೀಲರ ಪತ್ರ ಸಂಖ್ಯೆ 4007/ಎಜಿ/ಕೆಎಟಿ/2015–16,ದಿನಾಂಕ 14/18–8–2015.

9) ಸರ್ಕಾರದ ಪತ್ರ ಸಂಖ್ಯೆ ಸಿಆಸುಇ 2 ಸೇಇವಿ 2015, ದಿನಾಂಕ 21–9–2015.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ 7–2–2015ರ ಪತ್ರದಲ್ಲಿ ಅಪರ ಪೋಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಶ್ರೀ ರಮೇಶ ತಂದೆ ಹಣಮಂತ ಬಿದನೂರ, ಸಾ. ನವರಸಪುರ ಕಾಲನಿ, ವಿಜಯಪುರ ಇವರು ದಿನಾಂಕ 19–1–2015ರಂದು ವಿಜಯಪುರ ಲೋಕಾಯುಕ್ತ ಪೋಲೀಸ್‌ಠಾಣೆಯಲ್ಲಿ ಶ್ರೀಮತಿ ಅಪರ್ಣಾ ಪಾವಟೆ, ತಹಶೀಲ್ದಾರರು, ವಿಜಯಪುರ (ಆರೋಪಿ–1) ಹಾಗೂ ಶ್ರೀ ಶಂಕರಗೌಡ ತಂದೆ ಬಸವನಗೌಡ ಬಿರಾದಾರ, ಗ್ರಾಮ ಲೆಕ್ಕಾಧಿಕಾರಿ, ಬರಟಗಿ, ವಿಜಯಪುರ (ಆರೋಪಿ–2) ಇವರುಗಳ ವಿರುದ್ಧ ದೂರು ನೀಡಿ, ತಮಗೆ ಭೂಮಿ ವಿಕಾಸ ಎಂಬ ಸಂಸ್ಥೆಯ ವತಿಯಿಂದ ನಿವೇಶನಗಳನ್ನು ಅಭಿವೃದ್ಧಿಪಡಿಸಿ ಮಾರಾಟ ಮಾಡುವ ಸಲುವಾಗಿ ವಿಜಯಪುರ ತಾಲ್ಲೂಕಿನ ತೊರವಿ ಗ್ರಾಮದ ರೆ.ಸರ್ವೆ ನಂ. 580/2, 581/1, 581/2ಅ ಹಾಗೂ 581/2ಬ, 569/2ಎ ಜಮೀನುಗಳ ಭೂ ಬದಲಾವಣೆಗಾಗಿ ಭೂಸ್ವಾಧೀನ ಕಾಯಿದೆ ಕಲಂ 1960ರ 79(ಎ) ಹಾಗೂ (ಬಿ) ಉಲ್ಲಂಘನೆ ಆಗದಿರುವ ಬಗ್ಗೆ ಮತ್ತು ಸದರಿ ಜಮೀನುಗಳ ಪಿ.ಟಿ.ಸಿ.ಎಲ್. ಕಾಯಿದೆ ಉಲ್ಲಂಘನೆ ಆಗದಿರುವ ಬಗ್ಗೆ ಮಾನ್ಯ ತಹಶೀಲ್ದಾರ್, ವಿಜಯಪುರ ಇವರು ಪ್ರಮಾಣ ಪತ್ರ ನೀಡುವ ಸಲುವಾಗಿ ಸುಮಾರು 2–3 ತಿಂಗಳುಗಳಿಂದ ವಿಳಂಬ ಮಾಡುತ್ತಾ, ಗ್ರಾಮ ಲೆಕ್ಕಾಧಿಕಾರಿ ಶ್ರೀ ಶಂಕರಗೌಡತಂದೆ ಬಸವನಗೌಡ ಬಿರಾದಾರ ಇವರ ಮುಖಾಂತರ ಶ್ರೀಮತಿ ಅಪರ್ಣಾ ಪಾವಟೆ, ತಹಶೀಲ್ದಾರರು, ವಿಜಯಪುರ ಇವರು ರೂ. 1,00,000 ಹಣದ ಬೇಡಿಕೆ ಇಟ್ಟಿದ್ದು, ತಮಗೆ ಲಂಚ ನೀಡಲು ಇಷ್ಟವಿಲ್ಲದ ಕಾರಣ ಸದರಿ ಅಧಿಕಾರಿ / ನೌಕರರುಗಳ ವಿರುದ್ಧ ಸೂಕ್ತ ಕಾನೂನು ಕ್ರಮ ಜರುಗಿಸುವಂತೆ ಕೋರಿದ್ದರೆಂದು ತಿಳಿಸಿದ್ದರು.

ಮುಂದುವರಿದು, ಫಿರ್ಯಾದುದಾರರಾದ ಶ್ರೀ ರಮೇಶ ತಂದೆ ಹಣಮಂತ ಬಿದನೂರ, ಸಾ. ನವರಸಪುರ ಕಾಲನಿ, ವಿಜಯಪುರ ಇವರು ಸಲ್ಲಿಸಿದ ದೂರನ್ನು ಶ್ರೀ ನಂದೀಶ್ವರ ಕುಂಬಾರ, ಪೋಲೀಸ್ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ವಿಜಯಪುರ ಇವರು ವಿಜಯಪುರ ಲೋಕಾಯುಕ್ತ ಪೋಲೀಸ್‌ಠಾಣೆಯಲ್ಲಿ ಮೊಕದ್ದಮೆ ಸಂಖ್ಯೆ 2/2015ರಲ್ಲಿ ಕಲಂ 7, ಲಂಚ ನಿರೋಧಕ ಕಾಯಿದೆ 1988ರ ಪ್ರಕಾರ ದಿನಾಂಕ 19–1–2015ರಂದು ಪ್ರಕರಣವನ್ನು ದಾಖಲಿಸಿ ಕೊಂಡು ತನಿಖೆ ಕೈಗೊಂಡಿದ್ದು, ದಿನಾಂಕ 19–1–2015ರಂದು ಆರೋಪಿ–1 ಶ್ರೀಮತಿ ಅಪರ್ಣಾ ಪಾವಟೆ, ತಹಶೀಲ್ದಾರರು, ವಿಜಯಪುರ ಇವರ ಸೂಚನೆಯ ಮೇರೆಗೆ ಆರೋಪಿ–2 ಶ್ರೀ ಶಂಕರಗೌಡ ತಂದೆ ಬಸವನಗೌಡ ಬಿರಾದಾರ, ಗ್ರಾಮ ಲೆಕ್ಕಾಧಿಕಾರಿ, ಬರಟಗಿ, ವಿಜಯಪುರ ಇವರು ವಿಜಯಪುರ ಜಿಲ್ಲಾಧಿಕಾರಿಗಳ ಕಾರ್ಯಾಲಯದ ಆವರಣದಲ್ಲಿರುವ ಬಸವೇಶ್ವರ ಹೋಟೆಲ್ ಮುಂದೆ ಫಿರ್ಯಾದುದಾರರಿಂದ ಲಂಚದ ಹಣ ರೂ. 1,00,000ಗಳನ್ನು ಒತ್ತಾಯ ಮಾಡಿ ತಮ್ಮ ಬಲಗೈಯಿಂದ ಪಡೆದು, ಎರಡೂ ಕೈಗಳಿಂದ ಎಣಿಸಿ, ತಮ್ಮ ಪ್ಯಾಂಟಿನ ಎಡಜೇಬಿನಲ್ಲಿಟ್ಟುಕೊಂಡು ವಿಜಯಪುರ ಲೋಕಾಯುಕ್ತ ಪೋಲೀಸರ ಕೈಗೆ ಸಿಕ್ಕಿ ಬಿದ್ದಿರುವುದರಿಂದ ಈ ಪ್ರಕರಣದಲ್ಲಿ ಆರೋಪಿ–1 ಶ್ರೀಮತಿ ಅಪರ್ಣಾ ಪಾವಟೆ, ತಹಶೀಲ್ದಾರರು, ವಿಜಯಪುರ ಮತ್ತು ಆರೋಪಿ–2 ಶ್ರೀ ಶಂಕರಗೌಡ ತಂದೆ ಬಸವನಗೌಡ ಬಿರಾದಾರ, ಗ್ರಾಮ ಲೆಕ್ಕಾಧಿಕಾರಿ, ಬರಟಗಿ, ವಿಜಯಪುರ ಇವರ ಮೇಲಿನ ಭ್ರಷ್ಟಾಚಾರದ ಆಪಾದನೆ ಮೇಲ್ನೋಟಕ್ಕೆ ಸಾಬೀತಾಗಿರುವುದಾಗಿ ತಿಳಿಸಿದ್ದು, ಸರ್ಕಾರದ ತಿದ್ದುಪಡಿ ಆದೇಶ ಸಂಖ್ಯೆ ಡಿಪಿಎಆರ್ 4 ಎಸ್‌ಡಿಇ 2000, ದಿನಾಂಕ 15–4–2002ರ ಹಿನ್ನೆಲೆಯಲ್ಲಿ ಆರೋಪಿ–1 ಶ್ರೀಮತಿ ಅಪರ್ಣಾ ಪಾವಟೆ, ತಹಶೀಲ್ದಾರರು, ವಿಜಯಪುರ ಇವರು ಪ್ರಕರಣದ ಸುಗಮ ತನಿಖೆಗೆ ಅಡ್ಡಿ ಉಂಟು ಮಾಡುವ ಮತ್ತು ತನಿಖೆಯಲ್ಲಿ ಹಸ್ತಕ್ಷೇಪ ಮಾಡುವ ಹಾಗೂ ಸಾಕ್ಷಿ ಪುರಾವೆಗಳನ್ನು ನಾಶಗೊಳಿಸುವ ಸಾಧ್ಯತೆಗಳಿರುವುದರಿಂದ ಇವರನ್ನು ಈ ಕೂಡಲೇ ಅಮಾನತ್ತುಗೊಳಿಸಲು ಹಾಗೂ ಇವರ ಲೀನ್ ಅನ್ನು ಬೇರೆಡೆಗೆ ವರ್ಗಾಯಿಸಬೇಕೆಂದು ಅಪರ ಪೋಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಶಿಫಾರಸ್ಸು ಮಾಡಿದ್ದರು.

ಅಪರ ಪೋಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಇವರ ದಿನಾಂಕ7–2–2015ರ ಪತ್ರದೊಂದಿಗೆ ಸ್ವೀಕೃತವಾಗಿದ್ದ ತನಿಖಾಧಿಕಾರಿಯವರ ಮಧ್ಯಕಾಲಿಕ ವರದಿ, ಪ್ರಥಮ ವರ್ತಮಾನ ವರದಿ, ಫಿರ್ಯಾದಿದಾರರೊಂದಿಗೆ ಆರೋಪಿ–1 ಶ್ರೀಮತಿ ಅಪರ್ಣಾ ಪಾವಟೆ, ತಹಶೀಲ್ದಾರ್ ಮತ್ತು ಆರೋಪಿ–2 ಶ್ರೀ ಶಂಕರಗೌಡ ತಂದೆ ಬಸವನಗೌಡ ಬಿರಾದಾರ, ಗ್ರಾಮ ಲೆಕ್ಕಿಗ ಇವರುಗಳು ನಡೆಸಿರುವ ದೂರವಾಣಿ ಸಂಭಾಷಣೆಯ ವಿವರಗಳನ್ನು ಹಾಗೂ ಆರೋಪಿ–2 ಶ್ರೀ ಶಂಕರಗೌಡ ತಂದೆ ಬಸವನಗೌಡ ಬಿರಾದಾರ, ಗ್ರಾಮ ಲೆಕ್ಕಿಗ ಇವರು ನೀಡಿರುವ ಸ್ವರಕ್ಷಣಾ ಹೇಳಿಕೆ ಹಾಗೂ ಪಂಚರ ಸಾಕ್ಷಿಗಳ ಹೇಳಿಕೆ ಎಲ್ಲವನ್ನು ಪರಿಶೀಲಿಸಿದಾಗ ಆರೋಪಿ–1 ಶ್ರೀಮತಿ ಅಪರ್ಣಾ ಪಾವಟೆ, ತಹಶೀಲ್ದಾರ್ ಇವರು ಫಿರ್ಯಾದುದಾರರಿಂದ ಭೂ ಬದಲಾವಣೆಗಾಗಿ ಭೂಸ್ವಾಧೀನ ಕಾಯಿದೆ ಉಲ್ಲಂಘನೆ ಆಗದಿರುವ ಬಗ್ಗೆ ಪ್ರಮಾಣ ಪತ್ರವನ್ನು ನೀಡಲು ಹಣದ ಬೇಡಿಕೆ ಇಟ್ಟು ಸದರಿ ಲಂಚದ ಹಣವನ್ನು ಆರೋಪಿ–2 ಶ್ರೀ ಶಂಕರಗೌಡ ತಂದೆ ಬಸವನಗೌಡ ಬಿರಾದಾರ, ಗ್ರಾಮ ಲೆಕ್ಕಾಧಿಕಾರಿ, ಬರಟಗಿ, ವಿಜಯಪುರ ಇವರ ಬಳಿ ನೀಡುವಂತೆ ಹೇಳಿರುವುದಕ್ಕೆ ಮೇಲ್ನೋಟದ ಸಾಕ್ಷ್ಯಗಳು ಇರುವುದು ಸರ್ಕಾರಕ್ಕೆ ಮನವರಿಕೆಯಾಗಿದ್ದರಿಂದ ಪ್ರಕರಣದ ಸುಗಮ ತನಿಖೆಯ ಹಿತದೃಷ್ಟಿಯಿಂದ ಇವರನ್ನು ಸೇವೆಯಲ್ಲಿ ಮುಂದುವರಿಸುವುದು ಸಮಂಜಸವಲ್ಲವೆಂದು ನಿರ್ಣಯಿಸಿದ ಸರ್ಕಾರವು ಅಧಿಕಾರಿಯವರು ಎಷ್ಟು ಅವಧಿಯವರೆಗೆ ನ್ಯಾಯಾಂಗ ಬಂಧನದಲ್ಲಿದ್ದರು ಎಂಬ ಮಾಹಿತಿಯು ತನಿಖಾಧಿಕಾರಿಯವರ ಮಧ್ಯಕಾಲಿಕ ವರದಿಯಲ್ಲಿ ಲಭ್ಯವಿಲ್ಲದೇ ಇದ್ದುದರಿಂದ ಶ್ರೀಮತಿ ಅಪರ್ಣಾ ಪಾವಟೆ, ಸರ್ಕಾರದ ಅಧೀನ ಕಾರ್ಯದರ್ಶಿ, ನಿಯೋಜನೆ ಮೇಲೆ ತಹಶೀಲ್ದಾರರು, ವಿಜಯಪುರ ಇವರನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ದಿನಾಂಕ 20–3–2015ರ ಸರ್ಕಾರದ ಆದೇಶದಲ್ಲಿ ಇವರ ವಿರುದ್ಧದ ಶಿಸ್ತು ಕ್ರಮವನ್ನು ಬಾಕಿಯಿರಿಸಿ ಆದೇಶ ಹೊರಡಿಸಿದ ದಿನಾಂಕದಿಂದ ಜಾರಿಗೆ ಬರುವಂತೆ ಅಮಾನತ್ತಿನಲ್ಲಿರಿಸಿ ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ದಿನಾಂಕ 8–6–2015ರ ಪತ್ರದಲ್ಲಿ ಅಪರ ಪೋಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಆರೋಪಿತ ಅಧಿಕಾರಿಯವರು ದಿನಾಂಕ 19–1–2015ರಿಂದ 27–1–2015ರವರೆಗೆ ನ್ಯಾಯಾಂಗ ಬಂಧನದಲ್ಲಿದ್ದರು ಎಂಬ ಮಾಹಿತಿಯನ್ನು ನೀಡಿದ್ದರಿಂದ ಈ ಪ್ರಕರಣದಲ್ಲಿ ಆರೋಪಿತ ಅಧಿಕಾರಿಯವರು 48 ಗಂಟೆಗಳಿಗೂ ಮೀರಿ ನ್ಯಾಯಾಂಗ ಬಂಧನಕ್ಕೆ ಒಳಪಟ್ಟಿರುವುದರಿಂದ ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ದಿನಾಂಕ 2–7–2015ರ ಸರ್ಕಾರಿ ಆದೇಶದಲ್ಲಿ ಆರೋಪಿತ ಅಧಿಕಾರಿಯವರು ನ್ಯಾಯಾಂಗ ಬಂಧನಕ್ಕೆ ಒಳಪಟ್ಟ ದಿನಾಂಕ 19–1–2015ರಿಂದಲೇ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಇವರ ವಿರುದ್ಧದ ಶಿಸ್ತು ಕ್ರಮವನ್ನು ಬಾಕಿಯಿಟ್ಟು ಸರ್ಕಾರಿ ಸೇವೆಯಿಂದ ಅಮಾನತ್ತಿನಲ್ಲಿರಿಸಿ ಆದೇಶಿಸಲಾಗಿದೆ.

ಶ್ರೀಮತಿ ಅಪರ್ಣಾ ಪಾವಟೆ, ಸರ್ಕಾರದ ಅಧೀನ ಕಾರ್ಯದರ್ಶಿ ಇವರು ತಮ್ಮನ್ನು ಅಮಾನತ್ತಿನಲ್ಲರಿಸಿ ಈಗಾಗಲೇ 3 ತಿಂಗಳು ಕಳೆದಿದ್ದು, ತಮಗೆ ಈವರೆವಿಗೂ ದೋಷಾರೋಪಣಾ ಪಟ್ಟಿ ಜಾರಿಯಾಗದೇ ಇರುವುದರಿಂದ ತಮ್ಮ ಅಮಾನತ್ತಿನ ಆದೇಶವನ್ನು ರದ್ದುಗೊಳಿಸುವಂತೆ ಮಾನ್ಯ ಕೆ.ಎ.ಟಿ.ಯಲ್ಲಿ ಅರ್ಜಿ ಸಂಖ್ಯೆ 5649/2015ನ್ನು ದಾಖಲಿಸಿದ್ದರು.

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



ಮೇಲೆ ಓದಲಾದ ಕ್ರಮ ಸಂಖ್ಯೆ (5)ರ ದಿನಾಂಕ 3–7–2015ರ ಸರ್ಕಾರದ ಪತ್ರದಲ್ಲಿ ಆರೋಪಿತ ಅಧಿಕಾರಿಯವರು ತಮ್ಮನ್ನು ಅಮಾನತ್ತಿನಲ್ಲಿರಿಸಿ ಈಗಾಗಲೇ 3 ತಿಂಗಳು ಕಳೆದಿದ್ದು, ತಮಗೆ ಈವರೆವಿಗೂ ದೋಷಾರೋಪಣಾ ಪಟ್ಟಿ ಜಾರಿಯಾಗದೇ ಇದ್ದುದನ್ನು ಮಾನ್ಯ ಕೆ.ಎ.ಟಿ.ಯಲ್ಲಿ ಪ್ರಶ್ನಿಸಿದ್ದುದರಿಂದ ನಿಯಮಾನುಸಾರ ಈ ಬಗ್ಗೆ ಕ್ರಮ ವಹಿಸುವಂತೆ ಅಪರ ಪೋಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರನ್ನು ಕೋರಲಾಗಿತ್ತು.

ಮುಂದುವರಿದು, ಮೇಲೆ ಓದಲಾದ ಕ್ರಮ ಸಂಖ್ಯೆ (6)ರ ದಿನಾಂಕ 25–7–2015ರ ಸರ್ಕಾರದ ಪತ್ರದಲ್ಲಿ ಶ್ರೀಮತಿ ಅಪರ್ಣಾ ಪಾವಟೆ, ಸರ್ಕಾರದ ಅಧೀನ ಕಾರ್ಯದರ್ಶಿ ಇವರನ್ನು ಸರ್ಕಾರಿ ಸೇವೆಯಿಂದ ಅಮಾನತ್ತುಗೊಳಿಸಿ ಈಗಾಗಲೇ 5 ತಿಂಗಳಿಗೂ ಹೆಚ್ಚಿನ ಅವಧಿಯಾಗಿದ್ದು, ಈವರೆವಿಗೂ ಕರ್ನಾಟಕ ಲೋಕಾಯುಕ್ತ ಸಂಸ್ಥೆಯಿಂದ ಅಂತಿಮ ತನಿಖಾ ವರದಿ ಸ್ವೀಕೃತವಾಗಿಲ್ಲದಿರುವುದರಿಂದ ಹಾಗೂ ಅಧಿಕಾರಿಯವರಿಗೆ ದೋಷಾರೋಪಣಾ ಪಟ್ಟಿ ಜಾರಿಯಾಗಿಲ್ಲದಿರುವುದರಿಂದ ಈ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳುವಂತೆ ಹಾಗೂ ಪ್ರಸ್ತುತ ಅಮಾನತ್ತಿನಲ್ಲಿರುವ ಶ್ರೀಮತಿ ಅಪರ್ಣಾ ಪಾವಟೆ, ಸರ್ಕಾರದ ಅಧೀನ ಕಾರ್ಯದರ್ಶಿ ಇವರನ್ನು ಸರ್ಕಾರಿ ಸೇವೆಗೆ ಪುನರ್‌ಸ್ಥಾಪಿಸುವ ಕುರಿತು ಕರ್ನಾಟಕ ಲೋಕಾಯುಕ್ತ ಸಂಸ್ಥೆಯ ಸಹಮತಿ ನೀಡುವಂತೆ ಅಪರ ಪೋಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರನ್ನು ಕೋರಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (5) ಮತ್ತು (6)ರ ಪತ್ರಗಳಿಗೆ ಸಂಬಂಧಿಸಿದಂತೆ ಕರ್ನಾಟಕ ಲೋಕಾಯುಕ್ತ ಸಂಸ್ಥೆಯಿಂದ ಯಾವುದೇ ಮಾಹಿತಿ ಸ್ವೀಕೃತವಾಗಿರುವುದಿಲ್ಲ. ಮಾನ್ಯ ಕೆ.ಎ.ಟಿ.ಯು ಈ ಪ್ರಕರಣದಲ್ಲಿ ಮೇಲೆ ಓದಲಾದ ಕ್ರಮ ಸಂಖ್ಯೆ (7)ರ ದಿನಾಂಕ 30–7–2015ರಂದು ನೀಡಿರುವ ತೀರ್ಪಿನಲ್ಲಿ ಈ ಕೆಳಕಂಡಂತೆ ಆದೇಶಿಸಿರುತ್ತದೆ :

4. Having regard to the fact that no charge memo has been issued to the applicant and considering the principles laid down in the above mentioned decisions. In the present case the order of suspension cannot be continued further. Hence, the application is allowed and the order of suspension dated 20-3-2015 (Annexure A1) passed by the respondent is quashed prospectively reserving liberty to the respondent to hold disciplinary proceedings against the applicant in relation to the allegation against her, if it is so desired.

ಮೇಲೆ ಓದಲಾದ ಕ್ರಮ ಸಂಖ್ಯೆ (8)ರ ದಿನಾಂಕ 18–8–2015ರ ಪತ್ರದಲ್ಲಿ ಸರ್ಕಾರಿ ವಕೀಲರು ಇದು ಮೇಲ್ಮನವಿ ಸಲ್ಲಿಸಲು ಅರ್ಹ ಪ್ರಕರಣವಾಗಿರುವುದಿಲ್ಲ ಎಂದು ಅಭಿಪ್ರಾಯ ನೀಡಿರುತ್ತಾರೆ. ಮೇಲೆ ಓದಲಾದ ಕ್ರಮ ಸಂಖ್ಯೆ (9)ರ ದಿನಾಂಕ 21–9–2015ರ ಪತ್ರದಲ್ಲಿ ಅಪರ ಪೋಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರಿಗೆ ಮಾನ್ಯ ಕೆ.ಎ.ಟಿ.ಯು ದಿನಾಂಕ 30–7–2015ರಂದು ನೀಡಿರುವ ತೀರ್ಪಿನ ಪ್ರತಿಯನ್ನು ಹಾಗೂ ಈ ಬಗ್ಗೆ ಸರ್ಕಾರಿ ವಕೀಲರು ಅಭಿಪ್ರಾಯವನ್ನು ನೀಡಿರುವ ದಿನಾಂಕ 18–8–2015ರ ಪತ್ರದ ಪ್ರತಿಯನ್ನು ಲಗತ್ತಿಸಿ ಕಳುಹಿಸಿ, ಮಾನ್ಯ ಕೆ.ಎ.ಟಿ.ಯು ದಿನಾಂಕ 30–7–2015ರಂದು ನೀಡಿರುವ ತೀರ್ಪಿನ ಹಿನ್ನೆಲೆಯಲ್ಲಿ ಆರೋಪಿತರ ವಿರುದ್ಧದ ಶಿಸ್ತುಕ್ರಮವನ್ನು ಬಾಕಿಯಿರಿಸಿ ಸೇವೆಗೆ ಮರುಸ್ಥಾಪಿಸುವ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳಬೇಕಾಗಿರುವುದರಿಂದ ಈ ಬಗ್ಗೆ ನಿಯಮಾನುಸಾರ ಜರೂರಾಗಿ ಕ್ರಮ ವಹಿಸುವಂತೆ ಹಾಗೂ ಈಗಾಗಲೇ ದಿನಾಂಕ 25–7–2015ರ ಪತ್ರದಲ್ಲಿ ಕೋರಲಾಗಿರುವಂತೆ ಶ್ರೀಮತಿ ಅಪರ್ಣಾ ಪಾವಟೆ, ಸರ್ಕಾರದ ಅಧೀನ ಕಾರ್ಯದರ್ಶಿ ಇವರ ವಿರುದ್ಧದ ಲೋಕಾಯುಕ್ತ ಟ್ರ್ಯಾಪ್ ಪ್ರಕರಣಕ್ಕೆ ಸಂಬಂಧಿಸಿದಂತೆ ಅಂತಿಮ ತನಿಖಾ ವರದಿಯನ್ನು ಮತ್ತು ಸದರಿ ಅಧಿಕಾರಿಯವರ ವಿರುದ್ಧದ ಶಿಸ್ತು ಕ್ರಮವನ್ನು ಬಾಕಿಯಿರಿಸಿ ಸರ್ಕಾರಿ ಸೇವೆಗೆ ಮರುಸ್ಥಾಪಿಸುವ ಬಗ್ಗೆ ಕರ್ನಾಟಕ ಲೋಕಾಯುಕ್ತ ಸಂಸ್ಥೆಯ ಸಹಮತಿ ನೀಡುವಂತೆ ಮತ್ತೊಮ್ಮೆ ಕೋರಲಾಗಿತ್ತು.

ಶ್ರೀಮತಿ ಅಪರ್ಣಾ ಪಾವಟೆ, ಸರ್ಕಾರದ ಅಧೀನ ಕಾರ್ಯದರ್ಶಿ ಇವರ ವಿರುದ್ಧದ ಲೋಕಾಯುಕ್ತ ಟ್ರ್ಯಾಪ್ ಪ್ರಕರಣಕ್ಕೆ ಸಂಬಂಧಿಸಿದಂತೆ ಆರೋಪಿತ ಅಧಿಕಾರಿಯವರನ್ನು ಅಮಾನತ್ತಿನಲ್ಲಿರಿಸಿರುವುದಕ್ಕೆ ಸಂಬಂಧಿಸಿದಂತೆ ಮಾನ್ಯ ಕೆ.ಎ.ಟಿ.ಯು ದಿನಾಂಕ 30–7–2015ರಂದು ನೀಡಿರುವ ತೀರ್ಪಿನ ಹಿನ್ನೆಲೆಯಲ್ಲಿ ಆರೋಪಿತ ಅಧಿಕಾರಿಯವರನ್ನು ಅಮಾನತ್ತಿನಲ್ಲಿರಿಸಿ ಈಗಾಗಲೇ ಸುಮಾರು 8 ತಿಂಗಳು ಕಳೆದಿರುವುದರಿಂದ ಮತ್ತು ದಿನಾಂಕ 3–7–2015, 25–7–2015 ಮತ್ತು 21–9–2015ರ ಪತ್ರಗಳಲ್ಲಿ ಕರ್ನಾಟಕ ಲೋಕಾಯುಕ್ತ ಸಂಸ್ಥೆಯನ್ನು ಆರೋಪಿತ ಅಧಿಕಾರಿಯವರ ವಿರುದ್ಧದ ಅಂತಿಮ ತನಿಖಾ ವರದಿಯನ್ನು ನೀಡುವಂತೆ ಮತ್ತು ಸದರಿ ಅಧಿಕಾರಿಯವರ ವಿರುದ್ಧದ ಶಿಸ್ತು ಕ್ರಮವನ್ನು ಬಾಕಿಯಿರಿಸಿ ಸರ್ಕಾರಿ ಸೇವೆಗೆ ಮರುಸ್ಥಾಪಿಸುವ ಬಗೆಗಿನ ಅಭಿಪ್ರಾಯವನ್ನು ನೀಡುವಂತೆ ಕೋರಲಾಗಿತ್ತು.

ಆದರೆ ಈ ಬಗ್ಗೆ ಕರ್ನಾಟಕ ಲೋಕಾಯುಕ್ತ ಸಂಸ್ಥೆಯಿಂದ ಈವರೆವಿಗೂ ಯಾವುದೇ ಮಾಹಿತಿ ಸ್ವೀಕೃತವಾಗದೇ ಇರುವುದರಿಂದ ಶ್ರೀಮತಿ ಅಪರ್ಣಾ ಪಾವಟೆ, ಸರ್ಕಾರದ ಅಧೀನ ಕಾರ್ಯದರ್ಶಿ ಇವರ ವಿರುದ್ಧದ ಶಿಸ್ತು ಕ್ರಮವನ್ನು ಬಾಕಿಯಿರಿಸಿ ಸದರಿಯವರ ಅಮಾನತ್ತನ್ನು ತೆರವುಗೊಳಿಸಿ ಸೇವೆಗೆ ಪುನರ್ ಸ್ಥಾಪಿಸಲು ನಿರ್ಧರಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 221 ಸಅಸೇ 2015, ಬೆಂಗಳೂರು, ದಿನಾಂಕ 06ನೇ ಅಕ್ಟೋಬರ್ 2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 10(5)(ಸಿ) ದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಶ್ರೀಮತಿ ಅಪರ್ಣಾ ಪಾವಟೆ, ಸರ್ಕಾರದ ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ, ಇವರ ವಿರುದ್ಧ ದಿನಾಂಕ 19–1–2015ರಂದು ವಿಜಯಪುರ ಲೋಕಾಯುಕ್ತ ಠಾಣೆಯಲ್ಲಿ ಟ್ರ್ಯಾಪ್ ಪ್ರಕರಣಕ್ಕೆ ಸಂಬಂಧಿಸಿದಂತೆ ದಾಖಲಾಗಿರುವ ಮೊಕದ್ದಮೆ ಸಂಖ್ಯೆ 2/2015ಕ್ಕೆ ಸಂಬಂಧಿಸಿದಂತೆ ಸದರಿ ಅಧಿಕಾರಿಯವರ ವಿರುದ್ಧದ ಶಿಸ್ತು ಕ್ರಮವನ್ನು ಬಾಕಿಯಿರಿಸಿ, ಇವರ ಅಮಾನತ್ತನ್ನು ತಕ್ಷಣದಿಂದ ಜಾರಿಗೆ ಬರುವಂತೆ ತೆರವುಗೊಳಿಸಿ, ಸರ್ಕಾರಿ ಸೇವೆಗೆ ಪುನರ್ ಸ್ಥಾಪಿಸಿ ಆದೇಶಿಸಿದೆ.

ಶ್ರೀಮತಿ ಅಪರ್ಣಾ ಪಾವಟೆ, ಸರ್ಕಾರದ ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ ಇವರನ್ನು ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ) – ಶ್ರೀಮತಿ ಬಿ.ಪಿ. ರಾಧಾಮಣಿ ಇವರ ಸ್ವಯಂ ನಿವೃತ್ತಿಯಿಂದ ತೆರವಾದ ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಚಂದ್ರಶೇಖರ**

ಸರ್ಕಾರದ ಅಧೀನ ಕಾರ್ಯದರ್ಶಿ

**PR. 24** ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–6).

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59